ತುಮಕೂರು ನಗರದಲ್ಲಿ ನೂತನವಾಗಿ ನಿರ್ಮಿಸಿರುವ
ಅತ್ಯಾಧುನಿಕ ಸೌಕರ್ಯಗಳನ್ನೊಳಗೊಂಡ ವಸತಿಗೃಹ

ಹೋಟೆಲ್ ಶ್ರೀ ವಿಘ್ನೇಶ್ವರ ಕಂಫರ್ಟ್

ಸರ್ಕಾರಿ ಕಾಲೇಜು ಮುಂಭಾಗ, ಬಿ.ಹೆಚ್. ರಸ್ತೆ, ತುಮಕೂರು-1
ದೂರವಾಣಿ : 2255883, 2257770, 2257774, 2257772 ಫ್ಯಾಕ್ಸ್ : 2255873



- ಮೂರು ವಿವಿಧ ದರ್ಜೆಯ 50 ಸುಸಜ್ಜಿತ ಕೊಠಡಿಗಳು
- ವಿಶೇಷ ವ್ಯವಸ್ಥೆಯ ಹವಾನಿಯಂತ್ರಿತ ಕೊಠಡಿಗಳು
- ಹವಾನಿಯಂತ್ರಿತ ಮಿನಿ ಕಾನ್ಫರೆನ್ಸ್ ಹಾಲ್
- ವಿಶಾಲವಾದ ಪಾರ್ಕಿಂಗ್ ವ್ಯವಸ್ಥೆ
- ಪ್ರತಿ ಕೊಠಡಿಗೆ ಟಿ.ವಿ., ಟೆಲಿಫೋನ್ ಸಂಪರ್ಕ
- ಹವಾನಿಯಂತ್ರಿತ ವಿ.ಐ.ಪಿ. ರೂಂ.
- ಶಾಶ್ವತ ವಿದ್ಯುತ್ ವ್ಯವಸ್ಥೆ
- ಪರಿಣಿತ ಸಿಬ್ಬಂದಿಯ ವಿನೀತ ಸೇವೆ

ಲಿಫ್ಟ್ ಸೌಲಭ್ಯವಿದೆ

ಹವಾನಿಯಂತ್ರಿತ ಉಪಹಾರ ಗೃಹ

ಮಾಲೀಕರು : ಎಸ್.ಜಿ. ಚಂದ್ರಮೌಳಿ, ಗ್ರಾನೈಟ್ ಉದ್ಯಮಿ





ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು :
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ – 572 104.

ವಿಳಾಸ :
"ಸಂಪಾದಕರು",
'ಸಿದ್ಧಗಂಗಾ ಮಾಸಪತ್ರಿಕೆ'
ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ – 572 104
ದೂರವಾಣಿ : 2280055

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್
ನಂ. 4, ಎಂ.ಎಸ್. ರಾಮಯ್ಯ ಇಂಡಸ್ಟ್ರಿಯಲ್ ಎಸ್ಟೇಟ್
ಗೋಕುಲ, ಬೆಂಗಳೂರು – 54.
ದೂರವಾಣಿ : 23604087

ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೪೪ ಜನವರಿ ೨೦೦೮ ಸಂಚಿಕೆ : ೧

## ಒಳಪುಟಗಳಲ್ಲಿ ..................



ಚಂದಾ ವಿವರ :
ವಾರ್ಷಿಕ ಚಂದಾ ರೂ. ೧೨೦/-
ಆಜೀವ ಸದಸ್ಯತ್ವ ರೂ. ೧೦೦೦/- ಬಿಡಿ ಪ್ರತಿಗಳು ರೂ. ೧೦/-

## ಹಳೆಯ ವರ್ಷದ ನೆನಪಿನಲ್ಲಿ ಹೊಸ ವರ್ಷಕ್ಕೆ ಸ್ವಾಗತ



ಹಳೆಯದಕ್ಕೆ ವಿದಾಯ. ಹೊಸದಕ್ಕೆ ಸ್ವಾಗತ. ಅನುಭವಕ್ಕೆ ಕೊನೆಯೆಲ್ಲಿ? ೨೦೦೭ ಕೊಟ್ಟು ಹೋದ ಅನುಭವಗಳಿಗೆ ಲೆಕ್ಕವಿಡಬಹುದೆ? ಬಿಟ್ಟು ಹೋದದ್ದೇನನ್ನು? ಅದರಲ್ಲಿ ಸಿಹಿ-ಕಹಿಗಳೆರಡೂ ಉಂಟಲ್ಲವೆ? ಕಹಿ ಇದ್ದಾಗ ತಾನೆ ಸಿಹಿಯ ರುಚಿಯ ಅರಿವು ಅನುಭವಕ್ಕೆ ಬರುವುದು. "ಸಾಸಿವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ" ಎಂದಿದ್ದಾನಲ್ಲವೆ ಅಲ್ಲಮಪ್ರಭು. ಯಾವಾಗಲೂ ಸುಖದ ಪ್ರಮಾಣ ಅಲ್ಪ, ಆದರೆ ಅದರ ಜೋಡಿಯಾದ ದುಃಖದ ಪ್ರಮಾಣ ಅಪಾರವೇ ತಾನೆ? 'ಪಾಪ-ಪುಣ್ಯ ಸೇರಿ ಒಡಲಾಯಿತ್ತು'. ಕಳೆದ ವರ್ಷವನ್ನು ಜರಡಿಯಾಡಿದಾಗ ಸಿಕ್ಕಿದ ಗಟ್ಟಿ-ಜೊಳ್ಳುಗಳೆಷ್ಟು? "ಅನುಭವವು ಸಿಹಿಯಲ್ಲ ಅದರ ನೆನಪೇ ಸವಿಯು" ಅಲ್ಲವೆ? ಸಮಿಶ್ರ ಸರ್ಕಾರ ಬಂತು, ಹೋಯ್ತು. ಮಾತು ಕೊಟ್ಟದಾಯ್ತು. ತಪ್ಪಿದ್ದೂ ಆಯ್ತು. ತಪ್ಪನ್ನು ಸಮರ್ಥಿಸಿಕೊಂಡದ್ದೂ ಕಂಡುಬಂತು. "ಕಣ್ಣೆತ್ತಿಯೂ ನೋಡದಿರು ದೊಡ್ಡವರ ಸಣ್ಣತನದತ್ತ, ಬಿಟ್ಟುಬಿಡು ಅವರನ್ನು ಅತ್ತ ಕಡೆಗೆ" ಎಂದುಕೊಂಡದ್ದು ಹಾದಿ ಬೀದಿಗಳಲ್ಲಿ, ಮೂಲೆ ಮುಡುಕುಗಳಲ್ಲಿ, ಹಳ್ಳಿ ದಿಳ್ಳಿಗಳಲ್ಲಿ, ಹೊಲಗದ್ದೆಗಳಲ್ಲಿ, ಕೂಲಿ ಕುಂಬಳದವರಲ್ಲಿ, ಸಭೆ, ಸಮಾರಂಭಗಳಲ್ಲಿ, ಸಂತೆ, ಮಾರುಕಟ್ಟೆಗಳಲ್ಲಿ, ಆಫೀಸು, ಕ್ಲಬ್ಬುಗಳಲ್ಲಿ, ಮದುವೆ ಮನೆಗಳಲ್ಲಿ ಕೇಳಿಸಿಕೊಂಡದ್ದಾಯ್ತು. 'ವಚನಭ್ರಷ್ಟ', 'ವಿಶ್ವಾಸದ್ರೋಹ'ಗಳೆಂಬ ನುಡಿನಾಣ್ಯಗಳ ಚಲಾವಣೆ ಅದ್ದೂರಿಯಾಗಿ ನಡೆಯಿತು. ಮುರಿದುಬಿತ್ತು ಸಚಿವ ಮಂಡಲ. ರಾಷ್ಟ್ರಪತಿ ಆಡಳಿತ ಬಂತು. ಇನ್ನು ಚುನಾವಣೆಯ ಅಶ್ವಮೇಧ ಕಾದಿದೆ. ಕಾಯೋಣ ೨೦೦೮ ಹೊಸದೇನನ್ನು ತರುತ್ತದೆಯೋ?



***

ಸಿದ್ಧಗಂಗಾ ಪ್ರಾರಂಭವಾದದ್ದು ೧೯೬೫ರಲ್ಲಿ ತ್ರೈಮಾಸಿಕವಾಗಿ, ಮಾಸಿಕವಾಗಿ ಮುನ್ನಡೆದದ್ದು ೧೯೭೪ ರಿಂದ. ೪೩ ವರ್ಷ ಮುಗಿದು ೪೪ನೇ ವರ್ಷಕ್ಕೆ ಈ ಸಂಕ್ರಾಂತಿಯೊಂದಿಗೆ ಮುಂದುವರಿದಿದೆ. ಇದೆಲ್ಲಕ್ಕೆ ಸಹಕರಿಸಿದವರು ತಾವು. ಆಶೀರ್ವದಿಸಿದವರು ಪರಮಪೂಜ್ಯ ಶ್ರೀ ಶ್ರೀಗಳು. ಪತ್ರಿಕೆ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ಹೆಮ್ಮೆಯ ಸೇವಾಮುಖಿ. ಶ್ರೀಮಠದ ಮುಖವಾಣಿ. ಪತ್ರಿಕೆ ಇನ್ನೂ ಆಕರ್ಷಕವಾಗಿ, ಮೌಲಿಕವಾಗಿ ಪ್ರಕಟವಾಗಲು ತಮ್ಮ ಸಲಹೆ, ಸಹಕಾರಗಳನ್ನು ಅಪೇಕ್ಷಿಸುತ್ತದೆ. ಸಂಕ್ರಾಂತಿ ಎಲ್ಲರಿಗೆ ಶುಭವನ್ನು ತರಲಿ ಎಂದು ಆಶಿಸುತ್ತೇನೆ.

– ಸಂಪಾದಕ





## ನಮಗಿಂದು ಬೇಕಾಗಿರುವುದು ....



ಇತ್ತೀಚಿನ ದಿನಮಾನಗಳಲ್ಲಿ ಉನ್ನತ ಸ್ಥಾನಗಳನ್ನು ಅಲಂಕರಿಸಿದವರ ನಡೆ-ನುಡಿಗಳನ್ನು ಗಮನಿಸಿದಾಗ ತುಂಬಾ ವಿಷಾದವಾಗುತ್ತದೆ. ಅವರಲ್ಲಿ ಇಬ್ಬಂದಿತನ ಎದ್ದು ಕಾಣುತ್ತದೆ. ಅವರ ಒಳ-ಹೊರಗುಗಳಲ್ಲಿ ಅಪಾರ ವ್ಯತ್ಯಾಸವಿರುವುದು ತಿಳಿಯುತ್ತದೆ. ಎಲ್ಲರೂ ಆಡುವ ಮಾತು ಸಾರ್ವಜನಿಕ ಸೇವೆಯನ್ನೇ ಕುರಿತದ್ದಾಗಿರುತ್ತದೆ. ಆದರೆ ಆ ಮಾತಿನ ಒಳಗೆ ಸ್ವಾರ್ಥ ತುಂಬಿರುತ್ತದೆ. ಯೋಜನೆಗಳ ಮಹಾಪೂರವೇ ಹರಿದುಬರುತ್ತದೆ. ಉಪಯೋಗ ಮಾತ್ರ ಸಾರ್ವಜನಿಕರಿಗೆ ಸಲ್ಲುವುದು ನಗಣ್ಯ. ಒಂದು ಕಥೆ ನೆನಪಿಗೆ ಬರುತ್ತದೆ. ವಿನೋಬಾಭಾವೆ ಹೇಳುತ್ತಿದ್ದ ಕಥೆ ಹೀಗಿದೆ. ಒಂದೂರಿನಲ್ಲಿ ಒಬ್ಬ ಬಾವಿಯೊಂದನ್ನು ತೆಗೆಸುತ್ತಾನೆ. ಏತದ ಮೂಲಕ ತನ್ನ ಗದ್ದೆಗೆ ನೀರು ಹಾಯಿಸುವ ಪ್ರಯತ್ನ ಮಾಡುತ್ತಾನೆ. ಆದರೆ ಬಾವಿಯಿಂದ ಏತದ ಮೂಲಕ ಎತ್ತಿದ ನೀರನ್ನೆಲ್ಲಾ ಗದ್ದೆಗಾಗಿ ತೋಡಿದ ಕಾಲುವೆಯೇ ಕುಡಿದು ಬಿಡುತ್ತದೆ. ಗದ್ದೆಗೆ ನೀರೇ ಹರಿಯುವುದಿಲ್ಲ. ಹಾಗಾಗಿದೆ ಇಂದು ನಮ್ಮ ಸರ್ಕಾರಗಳು ರೂಪಿಸುತ್ತಿರುವ ಯೋಜನೆಗಳು. ಯೋಜನೆಗಳ ಫಲ ತಲುಪಬೇಕಾದವರಿಗೆ ತಲುಪುತ್ತಲೇ ಇಲ್ಲ. ತಲುಪಿದರೂ ಆ ಫಲದ ಪ್ರಮಾಣ ಅತ್ಯಲ್ಪ. ಕೋಟಿ ಕೋಟಿ ರೂಪಾಯಿಗಳು ಯೋಜನೆಗಳಿಗೆ ಖರ್ಚಾಗುತ್ತವೆ. ಆದರೆ ಶ್ರೀಸಾಮಾನ್ಯನಿಗೆ ತಲುಪುವುದು ಮಾತ್ರ ನೂರರ ಸಂಖ್ಯೆಯಾಗಿ. ಯೋಜಕರು, ಅಧಿಕಾರಿಗಳು, ಜನಪ್ರತಿನಿಧಿಗಳು, ಶುದ್ಧಹಸ್ತದವರಾಗದತನಕ ಯೋಜನೆಗಳು ಸಾರ್ಥಕವಾಗಲಾರವು. ಪತ್ರಿಕೆಗಳಲ್ಲಿ ಪ್ರಕಟವಾಗುವ ಅನೈತಿಕ ಮಾರ್ಗದಲ್ಲಿ ಸಂಗ್ರಹವಾಗುತ್ತಿರುವ ಹಣದ ಪ್ರಮಾಣವನ್ನು ಗಮನಿಸಿದಾಗ ಇದು ಆದರ್ಶ ಭಾರತವೇ ಎನ್ನುವ ಸಂದೇಹವುಂಟಾಗುತ್ತದೆ. ಇದನ್ನೆಲ್ಲಾ ನೋಡಿದಾಗ ನಮಗಿಂದು ಬೇಕಾಗಿರುವುದು ಶ್ರೀ ಲಾಲ್‌ಬಹದ್ದೂರು ಶಾಸ್ತ್ರಿಯವರಂಥ ಪ್ರಧಾನಮಂತ್ರಿಗಳು, ಡಾ|| ಎ.ಪಿ.ಜೆ. ಅಬ್ದುಲ್ ಕಲಾಂರಂಥ ರಾಷ್ಟ್ರಪತಿಗಳು ಅನಿಸುತ್ತದೆ. ಪ್ರಾಮಾಣಿಕತೆ, ಸರಳತೆ, ನಿಸ್ವಾರ್ಥತೆಗಳನ್ನಿಂದು ಹುಡುಕಬೇಕಾಗಿದೆ.

*

## ಶ್ರೀ ಸಿದ್ಧಲಿಂಗೇಶ್ವರ ವಚನ



ಊರಿಗೆ ಹೋಗುವ ದಾರಿಯೊಳಗೊಬ್ಬ ಊಲಿಗಿತ್ತಿ ಮನೆಯ ಮಾಡಿಕೊಂಡು
ದಾರಿಗೊಂಡು ಹೋಗುವಯ್ಯಗಳ ಬಾರಿಭೋ ಬಾರಿಭೋ ಎನ್ನುತ್ತಿದ್ದಾಳೆ ನೋಡಾ
ನಾರಿಯ ವಿಲಾಸವ ನೋಡಿ ದಾರಿಯ ತಪ್ಪಿದರು ನೋಡಾ ಅಯ್ಯಗಳು
ನಾರಿಯ ಕೊಂದಲ್ಲದೆ ದಾರಿಯ ಕಾಣಬಾರದು
ನಾರಿಯ ಕೊಂದು ದಾರಿವಿಡಿದು ನಡೆದು
ಊರ ಹೊಕ್ಕಲ್ಲದೆ ಉಪಟಳವಡಗದು ಕಾಣಾ
ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ

ಮೋಕ್ಷಾಶ್ರಯವೆಂಬ ಗ್ರಾಮಕ್ಕೆ ಗಮಿಸಲು ತಕ್ಕ ಸತ್ಕ್ರಿಯಾಚಾರವೆಂಬ ಮಧ್ಯಮಾರ್ಗದಲ್ಲಿ ಸಂಚಲರೂಪಾದ ಮಾಯೆಯೆಂಬ ವೇಶ್ಯಾಂಗನೆಯು ಪ್ರಪಂಚೆಂಬ ಮಂದಿರವನಾಗಮಾಡಿಕೊಂಡು ಸಮ್ಯಗ್ ಜ್ಞಾನವಿಡಿದಾಚರಿಸುವ ಜ್ಞಾನಶ್ರೇಷ್ಠರನು ತನ್ನ ವಿಷಯ ವಿಕಾರದ ಕಡೆಗಾಪ್ಪಾನಿಸಿ ಕರೆವುತ್ತಿರ್ದಪಳೆಂಬುದೀಗ-ಊರಿಗೆ ಹೋಗುವ ದಾರಿಯೊಳಗೊಬ್ಬ ಊಲಿಗಿತ್ತಿ ಮನೆಯಮಾಡಿಕೊಂಡು, ದಾರಿಗೊಂಡು ಹೋಗುವಯ್ಯಗಳ ಬಾರಿಭೋ ಬಾರಿಭೋ ಎನ್ನುತ್ತಿದ್ದಾಳೆ ನೋಡಾಯೆಂಬ -

ಆ ಮಾಯೆಯೆಂಬ ವೇಶ್ಯಾಂಗನೆಯ ಪ್ರಪಂಚಿನ ಸುಂದರತ್ವವನು ಲಿಂಗನಿರೀಕ್ಷಣೆ ತಪ್ಪಿ ಭಿನ್ನ ಜ್ಞಾನದ್ಯಕ್ಕಿನಿಂದೆ ನಿರೀಕ್ಷಿಸಿದಹಂಕಾರ ಶ್ರೇಷ್ಠರಲ್ಲರು, ಮೋಕ್ಷಮಾರ್ಗಕ್ಕೆ ವಿರಹಿತರಾದರೆಂಬುದೀಗ-ನಾರಿಯ ವಿಲಾಸವ ನೋಡಿ ದಾರಿಯತಪ್ಪಿದರು ನೋಡಾ ಅಯ್ಯಗಳೆಂಬ -

ಆ ವಿದ್ಯಾನ್‌ಶಕ್ತಿಯ ಅಜ್ಞಾನಮಾರ್ಗವನು, ಶ್ರೀಗುರುದೇವನ ಕರುಣೋಪದೇಶದಿಂದ ನಿವೃತ್ತಿಯ ಮಾಡ್ಯಲ್ಲದೆ, ಮೋಕ್ಷಮಾರ್ಗ ನಿದರ್ಶನವಾಗದೆಂಬುದೀಗ-ನಾರಿಯ ಕೊಂದಲ್ಲದೆ ದಾರಿಯ ಕಾಣಬಾರದೆಂಬ -

ಅಂತಪ್ಪ ಅವಿದ್ಯಾಶಕ್ತಿಯ ಜ್ಞಾನವನು ಜ್ಞಾನಗುರೂಪದೇಶದಿಂದೆ ನಿವೃತ್ತಿಯ ಮಾಡಿಕೊಂಡು, ಜ್ಞಾನವಿಡಿದಾಚರಿಸಿ, ಮೋಕ್ಷಾಶ್ರಯವಾದ- ಪರಶಿವಲಿಂಗದಲ್ಲೇಕಾರ್ಥವಾದಲ್ಲದೆ, ಕಾಲ ಕಾಮಾದಿಗಳ ಪೀಡನೆ ನಷ್ಟವಾದ-ಲರಿಯದೆಂಬುದೀಗ-ನಾರಿಯಕೊಂದು ದಾರಿವಿಡಿದು ನಡೆದು ಊರ ಹೊಕ್ಕಲ್ಲದೆ ಉಪಟಳವಡಗದು.

[ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನ ಸಾರಾಮೃತದ ಬೆಡಗಿನ ವಚನದ ಟೀಕೆ - ವೀರಶೈವ ಅಧ್ಯಯನ ಸಂಸ್ಥೆ - ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ - ಡಂಬಳ - ಗದಗ]

## ಶ್ರೀ ಸಿದ್ಧಗಂಗಾ ಗುರು ಕರುಣ ತ್ರಿವಿಧಿ

ಅಯ್ಯಾ ನಿಮ್ಮ ಸೇವೆಗೆ ತನುಮನ ಧನವನು
ಸವೆಸಿ ಸಂತೋಷವ ನನ್ನ ದೆನಿಸು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಡಿ ಹಾಡಿ-ನೋಡಿ ಕೂಡಿ ಭಾವಿಸಿ ಸುಖಿಸಿ
ಮಾಡಿ ಮನಸಾರೆ ತವ ಸೇವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯ
ನಿನ್ನ ಚರಣಕಿಂತ ಮಿಗಿಲೇನು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಎನ್ನ ಪಂಚೇಂದ್ರಿಯವ ನಿಮ್ಮತ್ತಲಿರಿಸಯ್ಯ
ಎನ್ನ ಕರಣಗಳ ನಿಮ್ಮೆಡೆಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಏವೇನೇವೆನಯ್ಯಾ ಒಳಶುದ್ಧವಿಲ್ಲದನಕ
ಏವೇನೇವೆನಯ್ಯಾ ನೂರನೋದಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತಂದೆ ನೀನಾಗಿರುವೆ ತಾಯಿ ನೀನಾಗಿರುವೆ
ಬಂಧುಬಳಗವಾಗಿ ಪೊರೆದಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಗೆಮೊಗದ ಅರಸನೆ ಮಿಗೆ ಮಿಗೆ ಚೆಲುವನೆ
ಬಗೆ ಬಾನು ಬೆಳಗಿರುವ ರವಿತೇಜ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹಗಲಿರುಳು ನೀ ದುಡಿದೆ ಜಗದ ಕಲ್ಯಾಣಕೆ
ಜಗವಿದು ಡೊಂಕು ಹಗಲಿರುಳು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಒಲಿದಂತೆ ಹಾಡುವ' ಒಲಿದಂತೆ ಪಾಡುವೆ
ಒಲಿದಂತೆ ಹಾಡಿ ಸುಖಿಸುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜಗದೆಲ್ಲ ಗುರುಗಳೊಳು ನಿನ್ನನ್ನೇ ನಾ ಕಾಂಬೆ
ನಿನ್ನ ಹೊರತು ಕಾಣೆ ಬೇರಾರ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

- ಹೆಚ್.ವಿ. ವೀರಭದ್ರಯ್ಯ







## ಸಿದ್ಧಲಿಂಗೇಶ್ವರರ ನಂತರದ ಸಿದ್ಧಗಂಗಾ ಕ್ಷೇತ್ರ

- ಲಿಂ. ಪಂಡಿತ್ ಚನ್ನಪ್ಪ ಎರೇಸೀಮೆ

ಸಿದ್ಧಲಿಂಗೇಶ್ವರರ ನಂತರ ಅನೇಕ ವರ್ಷಗಳವರೆಗೆ ಶ್ರೀ ಸಿದ್ಧಗಂಗಾ ಕ್ಷೇತ್ರದ ಪರಂಪರೆಯಲ್ಲಿ ಐತಿಹಾಸಿಕವಾಗಿ ನಮಗೆ ಆಧಾರಗಳು ಸಿಗುತ್ತಿಲ್ಲ. ಆದರೆ ಆ ವಿರಕ್ತಪರಂಪರೆ ಬೆಳೆದುಕೊಂಡು ಬಂದಿದೆ. ೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಮುಪ್ಪಿನಾರ್ಯರು, ರುದ್ರಸ್ವಾಮಿಗಳು, ಸಿದ್ಧಲಿಂಗಸ್ವಾಮಿಗಳು ಈ ಕ್ಷೇತ್ರಾಧಿಪತಿಗಳಾಗಿದ್ದ ಹಾಗೆ ತಿಳಿದುಬರುವುದು. ಸಿದ್ಧಲಿಂಗ ಸ್ವಾಮಿಗಳವರು ಶ್ರೀ ಮಠಾಧ್ಯಕ್ಷರಾಗಿದ್ದ ಕಾಲದಲಿ ೧೯ನೆಯ ಶತಮಾನದ ಕೊನೆಯಲ್ಲಿ ಸುಮಾರು ಕ್ರಿ.ಶ. ೧೮೮೦-೮೫ರ ಸುಮಾರಿಗೆ ಹಾನಗಲ್ಲು ತಾಲ್ಲೂಕು ಕೂಡಲ ವಿರಕ್ತ ಮಠಾಧೀನದಲ್ಲಿರುವ ಗುರುನಂಜೇಶ್ವರನ ಗದ್ದುಗೆಯಲ್ಲಿ ಪೂಜಾನುಷ್ಠಾನಗಳನ್ನು ಮಾಡಿಕೊಂಡಿದ್ದ ಸಿದ್ಧಪುರುಷರಾದ ಅಡವೀಸ್ವಾಮಿಗಳು (ಅಡವೀಶ್ವರ ಸ್ವಾಮಿಗಳು) ಗುಬ್ಬಿಗೆಬಂದ ಮೇಲೆ ಅವರು ಸಿದ್ಧಗಂಗಾಕ್ಷೇತ್ರದ ಮಹಾತ್ಮೆಯನ್ನರಿತವರಾಗಿ ಅಲ್ಲಿಂದ ಗಂಗಾಪೂಜೆಗೆ ಸಿದ್ಧಗಂಗೆಗೆ ಬರುವ ಜನರೊಡನೆ ಸಿದ್ಧಗಂಗೆಗೆ ಬಂದರು. ಇಲ್ಲಿನ ಸ್ಥಿತಿಗತಿಗಳನ್ನರಿತು ಈ ಕ್ಷೇತ್ರದಲ್ಲಿ ಅನೇಕ ರಚನಾತ್ಮಕ ಕಾರ್ಯಗಳನ್ನು ಕೈಕೊಂಡು ಶ್ರೀಕ್ಷೇತ್ರಕ್ಕೆ ಕೀರ್ತಿಯನ್ನು ಬೆಳಗಿಸಿದರು. ದಾಸೋಹ, ಸಂಸ್ಕೃತ ವಿದ್ಯಾಭ್ಯಾಸಗಳಿಗೆ ಅಂಕುರಾರ್ಪಣೆಯಾಮಾಡಿದರು.



### *ಅಡವೀಶ್ವರರ ಪೂರ್ವೇತಿಹಾಸ*

ಹಾನಗಲ್ಲು ತಾಲ್ಲೂಕು 'ಕೂಡಲ' ಒಂದು ಸಂಗಮ ಕ್ಷೇತ್ರ. ಈ ಗ್ರಾಮದ ಹತ್ತಿರ ಪಶ್ಚಿಮ ಘಟ್ಟಗಳ ಮಡಿಲಲ್ಲಿರುವ ಇಸಲೂರು ಗ್ರಾಮದಲ್ಲಿ ಹುಟ್ಟಿ ಬರುವ 'ಧರ್ಮಾ' ಎಂಬ ಹೊಳೆ, ಸಾಗರದ ಹತ್ತಿರ ಅದೇ ಪಶ್ಚಿಮ ಘಟ್ಟಗಳ ಸಾನು ಪ್ರದೇಶದ ವರದಾಮೂಲವೆಂಬ ಹೆಸರಿನ ಸ್ಥಳದಿಂದ ಹುಟ್ಟಿಬರುವ 'ವರದಾ' ಎಂಬ ಹೊಳೆಗಳ ಸಂಗಮವಾಗಿವೆ. ಆದ್ದರಿಂದಲೇ ಈ ಊರಿಗೆ ಕೂಡಲ ಎಂಬ ಹೆಸರು. ಇದೊಂದು ಪುರಾತನ ಪುಣ್ಯಕ್ಷೇತ್ರ. ಇಲ್ಲಿ ಭೂಗತವಾದ ಅನೇಕ ಅವಶೇಷಗಳು ಪ್ರಾಚೀನ ಚರಿತ್ರೆಯ ಮೇಲೆ ದೊಡ್ಡ ಬಂಡೆಗಲ್ಲನ್ನೇ ಎಳೆದಿವೆ. ಈ ಕೂಡಲದಲ್ಲಿ ಸಂಗಮೇಶ್ವರ ಶಿವಲಿಂಗವಿದೆ. ಬಸವಣ್ಣನವರ ಕುಮಾರನಾದ 'ಮುದ್ದು ಸಂಗಪ್ಪ'ನವರ ಗುಡಿಯಿದೆ. ಇವೆರಡೂ ದೇವಾಲಯಗಳಿಗೆ ಮೊದಲು ಭದ್ರವಾದ ಪ್ರಾಕಾರವಿದ್ದು ಈಗ ಅದೆಲ್ಲ ಬಿದ್ದು ಹೋಗಿದೆ. ಪಕ್ಕದಲ್ಲಿಯೇ ದೊಡ್ಡ ವಿರಕ್ತ ಮಠವಿದೆ. ಈ ಮಠದಲ್ಲಿ ನೀಲಮ್ಮನವರ ಗುಡಿ ಎಂಬ ಪ್ರತ್ಯೇಕ ಭಾಗವಿರುವುದೊಂದು ವೈಶಿಷ್ಟ್ಯ. ಈ ವಿರಕ್ತ ಮಠದ ಆವರಣದಲ್ಲಿಯೇ ಮಹಾಮಹಿಮಾಶಾಲಿಗಳಾದ ಗುರು ನಂಜೇಶ್ವರ (ಗುರುನಂಜಪ್ಪ) ಗದ್ದುಗೆಯಿದೆ.

ಇವರು ಮಹಾಮಹಿಮಾಶಾಲಿಗಳಾದ ವಿರಕ್ತವರೇಣ್ಯರೆನಿಸಿ ಆ ಮಠದಲ್ಲಿ ಆಗಿ ಹೋದರು. ಇವರ ಮಹಿಮೆಗಳು ಅನೇಕ: ಅದರಲ್ಲಿ ಮುಖ್ಯವಾದುದೆಂದರೆ: ಒಮ್ಮೆ ಪ್ರವಾಸ ಹೋಗಿದ್ದ ಗುರು ನಂಜೇಶ್ವರರಿಗೆ ಬಹಳ ಬಿಸಿಲಾಗಿ ತುಂಬಾ ಆಯಾಸವಾಗಿತ್ತಂತೆ. ಆಗ ಚೆನ್ನಾಗಿ ಚಿಗಿತ ಮಾವಿನ ಮರದ ಕೊಂಬೆಯೊಂದನ್ನು ಮುರಿದುಕೊಂಡು ಹೆಗಲ ಮೇಲೆ ಇಟ್ಟುಹೊತ್ತುಕೊಂಡು ಬಿಸಲಿನ ತಾಪವನ್ನು ಹೋಗಲಾಡಿಸಿಕೊಂಡರಂತೆ. ಬಿಸಿಲಿನ ತಾಪ ಕಡಿಮೆಯಾದ ಮೇಲೆ ಆ ಮುರಿದ ಮಾವಿನ ಕೊಂಬೆಯನ್ನು ಅಲ್ಲಿಯೇ ಹಳ್ಳದ ದಂಡೆಯಲ್ಲಿ ಭೂಮಿಯ ಬಿರುಕಿನಲ್ಲಿಟ್ಟು, ಹಳ್ಳದಿಂದ ನೀರನ್ನು ತಂದು ಅದಕ್ಕೆರೆದು 'ದೊಡ್ಡ ಮರವಾಗು' ಎಂದು ಆಶೀರ್ವದಿಸಿದರಂತೆ. ದೊಡ್ಡದಾಗಿ ಬೆಳೆದ ಆ ಮಾಮರ 'ಮಾರನಬೀಡು' ಎಂಬ ಹಳ್ಳಿಯಹತ್ತಿರ ಇಂದಿಗೂ ಇದೆ. ಅದಕ್ಕೆ 'ಗುರು ನಂಜಪ್ಪನ ಮಾವಿನಮರ' ಎಂದೂ ಹೇಳುತ್ತಾರೆ. ಪೂಜಾದಿಗಳನ್ನು ಮಾಡುತ್ತಾರೆ. ಇಂಥ ಮಹಿಮಾಶಾಲಿಗಳಾದ ಗುರುನಂಜೇಶ್ವರರ ಗದ್ದುಗೆ ಭವ್ಯವಾಗಿ ಕಟ್ಟಲ್ಪಟ್ಟಿದೆ (ಈಗ ಶಿಥಿಲಗೊಂಡಿದೆ). ಈ ಗುರುನಂಜೇಶ್ವರನ ಗದ್ದುಗೆಯಲ್ಲಿ ಪೂಜಾನುಷ್ಠಾನಗಳನ್ನು ಮಾಡಿಕೊಂಡಿದ್ದ ಅಟವೀಶ್ವರ ಸ್ವಾಮಿಗಳಿಗೆ ಕೂಡಲ ವಿರಕ್ತ ಮಠದ ಸಂಬಂಧವಿತ್ತೋ ಇಲ್ಲವೋ ತಿಳಿದು ಬರುವುದಿಲ್ಲ. ಅಂತೂ ಮಹಾಮಹಿಮಾಶಾಲಿಗಳೆಂದು ಕೀರ್ತಿವೆತ್ತವರು.

ಈ ಅಡವೀಶ್ವರ ಸ್ವಾಮಿಗಳವರ ಮೇಲೆ ಕೂಡಲದ ಮಾವಿನಮರದರೆಂಬ ಅಡ್ಡಹೆಸರಿನ ಗಣ್ಯಮನೆತನದ ಓರ್ವರಿಂದ ಮನನೋಯುವ ಪ್ರಸಂಗವೊಂದು ಜರುಗಿತು. ಸ್ವಾಮಿಗಳವರ ಮೇಲೆ ಕೈಮಾಡಿದರೆಂದೂ ಹೇಳಲಾಗುತ್ತಿದೆ. ಈ ಕೈಮಾಡಿದ ಪ್ರಸಂಗದಿಂದ ನೊಂದುಕೊಂಡ ಅಡವೀಶ್ವರರು ಕೂಡಲವನ್ನು ಬಿಟ್ಟು ರಾತ್ರಿಯೇ ಹೊರಟು ನಾಗನೂರಿಗೆ" ಬರುವಷ್ಟರಲ್ಲಿ ನಾಗನೂರಿನ ಜನರು ಇವರನ್ನು ಸಂತೈಸಿ ಪೂಜೆಗೆ ಕರೆದೊಯ್ದರು. ಪೂಜೆಮಾಡಿ ಮಲಗಿದರು. ರಾತ್ರಿ ಯಾರಿಗೂ ಹೇಳದೆ ತಮ್ಮ ಪೂಜಾಸಾಮಗ್ರಿಗಳನ್ನು ಅವರ ಮನೆಯಲ್ಲಿಯೇ ಬಿಟ್ಟು ಹೊರಟು ಬಿಟ್ಟರು. ಅವರು ಎಲ್ಲಿಗೆ ಹೋದರೆಂಬುದು ಯಾರಿಗೂ ಗೊತ್ತಾಗಲೇ ಇಲ್ಲ. ಸ್ವಾಮಿಗಳು ಹೊರಟು ಊರೂರು ದಾಟಿ ಗುಬ್ಬಿಗೆ ಬಂದು ತಂಗಿದರು. ಇತ್ತ ಕೂಡಲದ ಅನೇಕ ಜನಗಳು ಸ್ವಾಮಿಗಳವರನ್ನು ಹುಡುಕುವ ಕಾರ್ಯತತ್ಪರಾದರು. ಆದರೆ ಅವರು ಸಿಕ್ಕದೆ ನಿರಾಸೆಗೊಂಡರು. ಇಂದಿಗೂ ಈ ಭಾಗದಲ್ಲಿ "ಏನಾಗಿದ್ದಾರವ್ವ। ಕಂಡೀರೇನಡವಿ ಸ್ವಾಮೀನ ...." ಎಂಬ ಹೆಣ್ಣು ಮಕ್ಕಳ ಹಾಡು ಪ್ರಚಲಿತವಿದೆ. ಅಡಿವೆಪ್ಪ, ಅಡಿವೆವ್ವ ಇತ್ಯಾದಿ ಹೆಸರಿಡುವ ಪದ್ಧತಿಯೂ ವಿಶೇಷವಾಗಿದೆ. ಒಂದೇ ಮನೆಯಲ್ಲಿ ಇಬ್ಬರು ಮೂವರಿಗೆ ಈ ಹೆಸರಿಡುವ ಪದ್ಧತಿಯೂ ಕೂಡಲದಲ್ಲಿತ್ತು. ಈಗಲೂ ಅಡಿವೆಪ್ಪ ಅಡಿವೆವ್ವ ಹೆಸರುಗಳು ಅಧಿಕ್ಯವಿದೆ. ಇವೆಲ್ಲ ಅಡವಿಸ್ವಾಮಿಗಳ ಪ್ರಭಾವದಿಂದಾದ ಹೆಸರುಗಳು.

ವಿಷರೋಗ ಪರಿಹಾರಕಳೂ, ಇಷ್ಟಸಿದ್ಧಿದಾಯಿಕೆಯೂ ಎನಿಸಿ ಗೋಸಲಸಿದ್ಧೇಶ್ವರರ ಕಾಲದಿಂದಲೂ ಜನತೆಯಲ್ಲಿ ಶ್ರದ್ಧಾಭಕ್ತಿ ವಿಶ್ವಾಸಗಳನ್ನು ಮೂಡಿಸಿದ್ದ 'ಸಿದ್ಧಗಂಗಾ' ಮಾತೆಯ ಪೂಜೆ, (ಗಂಗಾಪೂಜೆ)ಗೆ ನಿಟ್ಟೂರ ಗುಬ್ಬಿಯ ಕಡೆಯಿಂದ ಜನ ಗಾಡಿಗಳನ್ನು ಹೂಡಿಕೊಂಡು ಪರ್ವದಿನಗಳಲ್ಲಿ, ಶುಕ್ರವಾರ, ಮಂಗಳವಾರಗಳಂದು ಬರುವ ಹೋಗುವ ಪರಿಪಾಠ ಇಂದಿನಂತೆ ಅಂದೆಯೂ ಇತ್ತು. ಗುಬ್ಬಿಯಲ್ಲಿ ಬೀಡುಬಿಟ್ಟಿದ್ದ ಅಡವೀಶ್ವರರಿಗೆ ಇದರ ಪರಿಚಯವಾಗಿ ಒಮ್ಮೆ ಇಲ್ಲಿಗೆ ಬರುವ ಗಾಡಿಯಲ್ಲಿ ಕುಳಿತು ಬಂದರು. ಇಲ್ಲಿನ ಪ್ರಾಕೃತಿಕ ಸನ್ನಿವೇಶ ತಪೋನುಷ್ಠಾನ ಯೋಗ್ಯಸನ್ನಿವೇಶ, ಕ್ಷೇತ್ರಮಹಾತ್ಮೆಗಳು ಅವರ ಮನವನ್ನು ಸೂರೆಗೊಂಡವು. ಕ್ಷೇತ್ರಾಧಿಪತಿಗಳಾಗಿದ್ದ ನಿ|| ಪ್ರ|| ಶ್ರೀ ಸಿದ್ಧಲಿಂಗ ಶಿವಯೋಗಿಗಳು ತಮ್ಮ ಪಾಡಿಗೆ ತಾವು ತಮ್ಮ ಪೂಜಾನುಷ್ಠಾನ ದಲ್ಲಿದ್ದು, ವಿಶೇಷ ಕಾರ್ಯಕ್ರಮಗಳನ್ನೇನೂ ಇಟ್ಟುಕೊಂಡಿದ್ದಿಲ್ಲ. ಅಡವೀಶ್ವರರು ದಾಸೋಹ ಸದ್ಭಾವಿಗಳು, ಪ್ರತ್ಯುತ್ಪನ್ನಮತಿಗಳು ತಮ್ಮ ಲೋಕೋಪಕಾರಕ ಸನ್ಮತಿಗೆ ಇಂತಹ ಸ್ಥಾನದ ಒಂದು ಅವಶ್ಯಕತೆಯೂ ಇತ್ತು. ಇಲ್ಲಿಯೇ ಸಿದ್ಧಗಂಗಾ ಗುಹೆಯಲ್ಲಿ ಉಳಿದು ಪೂಜಾನುಷ್ಠಾನಗಳಿಂದ ಕಾಲಯಾಪನೆ ಮಾಡುತ್ತ ತಪೋನಿರತ ರಾದರು. ಅವರ ತಪಸ್ಸಿಗೆ ಸಿದ್ಧಗಂಗಾ ಮಾತೆಯ ಕಾರುಣ್ಯ ಲಭ್ಯವಾಯಿತು. ಸಿದ್ಧಪುರುಷರೇ ಆದರು. ಚಿಕ್ಕ ಒಂದು ಸಂಸ್ಕೃತ ಪಾಠಶಾಲೆ ದಾಸೋಹಕ್ರಿಯೆ ಮೇಲ್ಭಾಗದ ಗುಹೆಯ ಪರಿಸರ ದಲ್ಲಿಯೇ ಪ್ರಾರಂಭವಾಯಿತು. ಮೊದಲೇ ಇದ್ದ ಅಲ್ಪಪ್ರಮಾಣದ ಅನ್ನ ಸಂತರ್ಪಣೆಯ ಕಾರ್ಯ ವ್ಯವಸ್ಥಾಬದ್ಧವಾಗಿ ಹೆಚ್ಚಿನ ಪ್ರಮಾಣದಲ್ಲಿ ಪ್ರಾರಂಭವಾಯಿತು. 'ಮತಕಮುರವರಾಧೀಶ ಸೋಮೇಶ್ವರವರ ಪ್ರಸಾದ ಲಬ್ಧಕವಿತಾವಿಶಾರದ ಶಿವಕವಿ ನಂಜುಂಡ ಶಿವಯೋಗಿ" ಗಳೆಂಬುವರು ಶ್ರೀಕ್ಷೇತ್ರಕ್ಕೆ ಬಂದು ಅಡವೀಶ್ವರರ ಪೂರ್ಣಾನುಗ್ರಹಕ್ಕೆ ಪಾತ್ರರಾದರು. ಅವರ ಸಹಾಯದಿಂದ ಅಡವೀಶ್ವರ ಸ್ವಾಮಿಗಳು ಸಿದ್ಧಗಂಗೆಯಲ್ಲಿ ಪಾಠಶಾಲೆಗೆ ಮೊದಲು ಮಾಡಿದರು. ಈ ಮತುಕೂರು ನಂಜುಂಡ ಶಿವಯೋಗಿಗಳು ಶರಣಲೀಲಾಮೃತ, ರಾಜಶೇಖರ ವಿಲಾಸ, ಚೆನ್ನಬಸವಪುರಾಣ, ಸರ್ವಜ್ಞವಚನ– ಮೊದಲ ಕಾವ್ಯಪಠಣದಲ್ಲಿ, ವಾಖ್ಯಾನದಲ್ಲಿ ಬಲ್ಲಿದರಾಗಿದ್ದರು. ಇವರ ವಿದ್ವತ್ತು, ಕವಿತ್ವಶಕ್ತಿ, ಬೋಧನಾಚಾತುರ್ಯ, ಕಾವ್ಯ ವಾಚನ ವ್ಯಾಖ್ಯಾನಗಳು ಕ್ಷೇತ್ರಕ್ಕೆ ಬರುವ ಜನಮನವನ್ನು ಸೂರೆಗೊಂಡವು. ಆಗಿನ ವೀರಶೈವ ಪಂಡಿತ ಪ್ರಕಾಂಡರಾದ ಆಸ್ಥಾನ ಮಹಾವಿದ್ವಾನ್ ಕರ್ನಾಟಕ ಭಾಷಾ ರತ್ನ ಪಿ.ಆರ್. ಕರಿಬಸವ ಶಾಸ್ತ್ರಿಗಳೇ ಮೊದಲಾದವರು ನಂಜುಂಡ ಶಿವಯೋಗಿಗಳವರ ಪಾಂಡಿತ್ಯ, ಶುದ್ಧಿ, ಸಿದ್ಧಿಗಳಿಗೆ ಮಾರು ಹೋದರು. ಇವರ ಕವಿತಾಶಕ್ತಿಯ ಬಗೆಗೆ ಪಿ.ಆರ್. ಕರಿಬಸವ ಶಾಸ್ತ್ರಿಗಳು – ಶ್ರೀ ನಂಜುಂಡ ಶಿವಯೋಗಿ ಗಳನ್ನು ನಾನು ಇಚ್ಛಾಪೂರ್ವಕವಾಗಿ ಸಂದರ್ಶಿಸಿ, ಅವರ ಗ್ರಂಥವನ್ನು ಓದಿದೆನು, ಅವರು ಸುಸಂಸ್ಕೃತವಾಗಿ ಸಂದರ್ಶಿಸಿ, ಅವರ ಗ್ರಂಥವನ್ನು ಓದಿದೆನು, ಅವರು ಸುಸಂಸ್ಕೃತವಾದ ಅಂತಃಕರಣವುಳ್ಳ ವರು; ಶುದ್ಧ ಚರಿತ್ರರು' ಅಸದೃಶ ಕವಿತಾಶಕ್ತಿಯುಳ್ಳವರು; ಅಭಿನವ ಕಾಳಿದಾಸ ಕೈ. ಬಸವಪ್ಪ ಶಾಸ್ತ್ರಿಗಳಿಗೆ ಸಮಾನರಿವರೊಬ್ಬರೇ. ಇಂತಹವರು ನಮ್ಮ ಸಮಾಜದಲ್ಲಿ ಅಪರೂಪ. ರಾಜಾಶ್ರಯವಿದ್ದಿದ್ದರೆ ಲೋಕವಿಖ್ಯಾತ ಕವಿಗಳೆಂದು ಹೆಸರಾಗುತ್ತಿದ್ದರು. ಗೌರವದಿಂದ ಪ್ರೀತಿಯಿಂದ ನನ್ನನ್ನು ಕಂಡ ಅವರನ್ನು ಪ್ರೀತಿಯಿಂದ ಗೌರವಿಸುತ್ತೇನೆ' ಎಂದಿದ್ದಾರೆ. ಈ ನಂಜುಂಡ ಶಿವಯೋಗಿಗಳು ಅಡವೀಶ್ವರ ಭಕ್ತಿಸಾರವೆಂಬ ಉತ್ತಮಮಟ್ಟದ ಭಕ್ತಿಜ್ಞಾನವೈರಾಗ್ಯ ಬೋಧಕಗ್ರಂಥವನ್ನು ಶ್ರೀ ಕ್ಷೇತ್ರದಲ್ಲಿ ರಚಿಸಿ ಅಡವೀಶ್ವರರಿಗೆ ಅರ್ಪಿಸಿದ್ದಾರೆ. ಆ ಗ್ರಂಥವು ಭಾಮಿನಿ ಷಟ್ಪದಿಯಲ್ಲಿದ್ದು ಪ್ರಸನ್ನ ಕವಿತಾವಾಣಿಯಿಂದ ಕೂಡಿದೆ. ೨೧೬ ಷಟ್ಪದಿಗಳಿಂದ ಕೂಡಿದ ಈ ಪದ್ಯಗ್ರಂಥದಲ್ಲಿ ಪ್ರತ್ಯೇಕವಾದ ೫ ಪದ್ಯಗಳು ಶಿವಪಾರ್ವತೀವರ್ಣನ ಪರವಾಗಿವೆ. ೨೧೬ ಪದ್ಯಗಳನ್ನು ಪ್ರತ್ಯೇಕಗೊಳಿಸಿದುದರ ಉದ್ದೇಶ ತಿಳಿದೇ ಇದೆ : ವೀರಶೈವದಲ್ಲಿ ೨೧೬ ಸಂಖ್ಯೆ ಲಿಂಗಸಕೀಲಕ ಬೋಧಕವಾದುದು. ಆದುದರಿಂದ ಅಟವೀಶ್ವರ ಭಕ್ತಿಸಾರವು ೨೧೫ ಪದ್ಯಗಳಿಂದ ಮುಗಿದೆ. ಪರಮೇಶ್ವರ ಮತ್ತು ಪಾರ್ವತಿಯ ಕೊನೆಯ ಸ್ತುತಿಗೆ ೫ ಪದ್ಯ ಮೀಸಲು. ಹೀಗೆ ಒಟ್ಟ ೨೨೧ ಪದ್ಯಗಳಿಂದ ಕೂಡಿದ ಈ ಗ್ರಂಥದ ಮೇಲೆ ರಾಜಶೇಖರ ವಿಲಾಸ, ಚೆನ್ನಬಸವ ಪುರಾಣ, ನಿಜಗುಣ ಶಿವಯೋಗಿಗಳ ಕೈವಲ್ಯ ಪದ್ಧತಿ ಮೊದಲಾದ ಪ್ರಸಿದ್ಧ ಗ್ರಂಥಗಳ ಪ್ರಭಾವವುಂಟಾಗಿದೆ. ಗ್ರಂಥದಲ್ಲಿ ಸಿದ್ಧಗಂಗಾ ಮಾತೆಯನ್ನು ಹೀಗೆ ಸ್ತುತಿಸಿದ್ದಾನೆ.

*ಅದ್ರಿಗುಹೆಯೊಳು ನೆಲಸಿ ತೋಂಟದ।*
*ಸಿದ್ಧಲಿಂಗೇಶ್ವರನ ಮೃದುಪದ।*
*ಪದ್ಮಸೇವೆಯೊಳಾವಗಂ ತವೆಸಿದ್ಧವಾಗಿರ್ಪ ॥*
*ಸಿದ್ಧಗಂಗೆಯೆ ಕೊಡುವುದೆನ್ನಯ।*
*ಬುದ್ಧಿಗತಿ ನಿರ್ಮಲವನೆಂಬೆನು।*
*ಶುದ್ಧ ಪುಣ್ಯಪ್ರದನೆ ಪಾಲಿಪುದೆಮ್ಮ ನಟವೀಶಾ ॥* (ಪ. ೪)

ಹಿಮಗಿರಿಕನ್ನೆಯೆನಿಸಿದ ಗಂಗೆಯನ್ನು ಸಿದ್ಧಗಂಗಾ ಮಾತೆಯೊಡನೆ ಅಭೇದವಾಗಿ :

*ಚೆನ್ನ ಸದ್ಗುಣರನ್ನೆ ಹಿಮಗಿರಿ।*
*ಕನ್ನೆನುತಿಸುವೆನಿನ್ನೆ ದೀನತ।*
*ರಣ್ಣೆ ಘನಸಂಪನ್ನೆ ಮಾನ್ಯೆವದಾನ್ಯೆಪಾವನ್ನೇ ॥*
*ಬನ್ನ ಬಡಿಸದೆ ದುರಿತಸಂಕುಲ।*
*ವನ್ನು ತೊಲಗಿಸಿ ಕರಣಶುದ್ಧಿಯ।*
*ಸನ್ನುತಳೆ ಕೃಪೆಮಾಳ್ಪುದೆಂಬೆನು ಪೊರೆವುದಟವೀಶಾ ॥* (ಪ.೫)

ಈ ಗ್ರಂಥವು ಪಾಠ್ಯಯೋಗ್ಯವಾಗಿದ್ದು ಉತ್ತಮ ಕವಿತಾ ಶಕ್ತಿಯಿಂದ ಕೂಡಿ ಭಕ್ತಿಜ್ಞಾನವೈರಾಗ್ಯಬೋಧಕವಾಗಿದೆ. ಪ್ರತಿ ಪದ್ಯವೂ 'ಪೊರೆವುದೆಮ್ಮನಟವೀಶಾ' 'ಪಾಲಿಪುದೆಮ್ಮನಟವೀಶಾ' ಇತ್ಯಾದಿಯಾಗಿ ಮುಕ್ತಾಯಗೊಳ್ಳುತ್ತದೆ.

ಇದಲ್ಲದೆ ಶಿವಯೋಗಿಗಳು ಅಟವೀಶ್ವರ ಗೀತಾಮಂಜರಿ, ಮಾರ್ಕಾಂಡೇಯವಿಲಾಸ, ಸುರಾಭಾಂಡೇಶ್ವರಕೋಪಖ್ಯಾನ ಹಾಲಾಹಲಭಕ್ಷಣೆಯ ಕಥೆ – ಮುಂತಾದ ಗ್ರಂಥಗಳನ್ನು ಬರೆದಿದ್ದಾರೆ. ಕವಿತಾಶಕ್ತಿಯ ಜೊತೆಗೆ ಇವರಿಗೆ ಚಿತ್ರಕಲಾ ನೈಪುಣ್ಯವೂ ಇತ್ತು.

ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ಮತಕೂರು ಶಿವಯೋಗಿಗಳ ವಿದ್ವತ್ತಿನ ಸೇವೆಯೊದಗಿದುದರ ಜೊತೆಗೆ ಇನ್ನೊಬ್ಬರು ಮಹಾವಿದ್ವಾಂಸರೂ ಉಭಯ ಕವಿತಾವಿಶಾರದರೂ ಎನಿಸಿದ ಮಾಗಡಿ ವೀರಪ್ಪ ಶಾಸ್ತ್ರಿಗಳ ಸೇವೆಯೂ ಕೊಂಚಕಾಲ ಒದಗಿತು. ಇಲ್ಲಿನ ವೇದ ಪಾಠಶಾಲೆಗೆ ಇವರು ವಿದ್ಯಾಭ್ಯಾಸಕ್ಕೆಂದು ಬಂದು ವಿದ್ಯಾಭ್ಯಾಸ ಮಾಡಿದರು. ಇವರು ಅಡವೀಶ್ವರರ ಕೃಪೆಗೆ ಪಾತ್ರರಾಗಿ ಹೋಗಿ ಅನೇಕ ಗ್ರಂಥಗಳನ್ನು ರಚಿಸಿದರು.

ಒಂದು ಕಡೆಯಲ್ಲಿ ವಿದ್ವಾಂಸರ ವಿದ್ವತ್ತಿನ ಪ್ರತಿಭಾ ಪ್ರಭೆಯೂ, ಮತ್ತೊಂದು ಕಡೆ ಅಡವೀಶ್ವರರ ಶಿವಯೋಗ ನಿಷ್ಠೆಯ ಉಜ್ವಲ ಪ್ರಕಾಶವೂ, ಮುಗುದೊಂದೆಡೆ ಗೋಸಲ ಸಿದ್ಧೇಶ್ವರರು ಮೊದಲುಗೊಂಡು ಹರದನಹಳ್ಳಿಯ ನಿರಂಜನ ಜಂಗಮವಂಶದವರ ತಪೋತೇಜದ ಸೂರ್ಯನ ಸಹಸ್ರ ಕಿರಣಗಳ ಹೊಂಬೆಳಗೂ ಮುಪ್ಪುರಿಗೊಂಡು ಶ್ರೀ ಸಿದ್ಧಗಂಗೆಯ ಕೀರ್ತಿಲತೆ ಚಿಗುರಿ ದಾಂಗುಡಿಯಿಟ್ಟು ಬೆಳೆಯತೊಡಗಿತು. ಭಕ್ತರ ಭಾವುಕರ, ಶ್ರೀಮಂತರ–ಕೊಡುಗೆಗಳು ಅಧಿಕವಾದವು. ಅಡವೀಶ್ವರರು ಸಿದ್ಧಗಂಗೆಯ ದಾಸೋಹದಿ ಕ್ರಿಯೆಗಳನ್ನು, ಚಿಕ್ಕದಾಗಿ ಪ್ರಾರಂಭಿಸಿದ ವಿದ್ಯಾಸಂಸ್ಥೆಯನ್ನು ಯಥಾಸಾಂಗವಾಗಿ ನೆರವೇರಿಸುವ ಹೊಣೆಯ ಜೊತೆಗೆ ತಾವು ಪೂರ್ವದಲ್ಲಿ ಗುಬ್ಬಿ ಕ್ಷೇತ್ರದಲ್ಲಿ ಎಲ್ಲಿ ಬಂದಿಳಿದಿದ್ದರೋ ಅಲ್ಲಿ ಒಂದು ಮಠವನ್ನು ನಿರ್ಮಾಣ ಮಾಡಬೇಕೆಂಬ ಸತ್ಸಂಕಲ್ಪ ಮಾಡಿದರು. ಭಕ್ತರ ನೆರವಿನಿಂದ ಗುಬ್ಬಿಯಲ್ಲಿ ಕೋಡಿಹಳ್ಳದ ದಂಡೆಯಲ್ಲಿ ಒಂದು ಮಠವನ್ನು ನಿರ್ಮಾಣ ಮಾಡಿ ಮುಗಿಸಿದರು. ತೊರೆಯ ದಂಡೆಯಲ್ಲಿ ಕಟ್ಟಿದ ಮಠವಾದ್ದರಿಂದ ಅದಕ್ಕೆ 'ತೊರೆಯ ಮಠ'ವೆಂದು ಕರೆಯಲಾಗುತ್ತಿದೆ. ಹರದನ ಹಳ್ಳಿಯ ಶೂನ್ಯಸಿಂಹಾಸನಾಧೀಶ್ವರರೂ, ತೋಂಟದ ಸಿದ್ಧಲಿಂಗೇಶ್ವರರ ಗುರುಗಳೂ, ಶ್ರೀ ಸಿದ್ಧಗಂಗೆಯಲ್ಲಿ ಅನೇಕ ಕಾಲ ತಪೋನುಷ್ಠಾನ ಮಾಡಿ ಗುಬ್ಬಿಯಲ್ಲಿ ಲಿಂಗೈಕ್ಯರಾದವರೂ ಆದ ಗೋಸಲ ಚೆನ್ನಬಸವೇಶ್ವರರ ದೇವಾಲಯದ ಪಕ್ಕದಲ್ಲಿ ೬೩ ಪುರಾತನರ ಮಂಟಪ, ಮಂಟಪದ ಮಧ್ಯದಲ್ಲಿ 'ಅಘನಾಶಿನಿ' ಎಂಬ ಕಲ್ಯಾಣಿಯನ್ನು ಕಟ್ಟಿಸಿದರು. ಈ ಕಾರ್ಯಗಳೆಲ್ಲ ಕ್ರಿ.ಸ. ೧೮೫೦ರ ಹೊತ್ತಿಗೆ ಮುಗಿದುವೆಂದು ಊಹಿಸಬಹುದು. ಏಕೆಂದರೆ ಈ ಕಾಲದಲ್ಲಿ ಹುಟ್ಟಿದ ಒಂದು ಶಾಸನ ದೇವಾಲಯದ ಪಕ್ಕದಲ್ಲಿದ್ದು ಅದರಲ್ಲಿ ಅಟವೀಶ್ವರರ ವಿಷಯದ ಪ್ರಸ್ತಾಪವಿದೆಯೆಂದು ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಹೇಳುತ್ತಾರೆ. ಚೆನ್ನಬಸವೇಶ್ವರರಿಗೆ ಬೆಳ್ಳಿಯ ಪಲ್ಲಕ್ಕಿಯನ್ನು ಮಾಡಿಸಿದರು. 'ತೊಟ್ಟಿಲ ಕೆರೆ' ಎಂಬ ಗ್ರಾಮದಲ್ಲಿ ವಿರಕ್ತಮಠವನ್ನು ಅಭಿವೃದ್ಧಿಗೆ ತಂದರು. ಹೀಗೆ ಈ ಭಾಗದಲ್ಲಿ ಅನೇಕ ಮಹತ್ಕಾರ್ಯಗಳನ್ನು ಸಾಧಿಸಿದ ಅಟವೀಶ್ವರರ ಮಮತೆ ಶ್ರೀ ಸಿದ್ಧಗಂಗಾ ಕ್ಷೇತ್ರದ ವಿಷಯದಲ್ಲಿ ಅಧಿಕವಾಯಿತು. ಅಷ್ಟರಲ್ಲಿ ಕ್ಷೇತ್ರಾಧಿಪತಿಗಳಾಗಿದ್ದ ಶ್ರೀ ನಿ.ಪ್ರ. ಸಿದ್ಧಲಿಂಗ ಶಿವಯೋಗಿಗಳು ಲಿಂಗೈಕ್ಯರಾಗಿ ಹೋಗಿದ್ದರು. ಸಿದ್ಧಗಂಗಾ ಕ್ಷೇತ್ರದಲ್ಲಿ ತಾವು ಮಾಡಿದ್ದ ಅನೇಕ ಲೋಕೋಪಕಾರಕ ಕಾರ್ಯ ಮತ್ತು ವೀರಶೈವ ಧರ್ಮಸಂವರ್ಧನೆ ಎಂಬ ಕಲ್ಪವೃಕ್ಷದ ಸಸಿಯನ್ನು ಶಿವಯೋಗ ಶಕ್ತಿಯ ಕಾರುಣ್ಯಜಲವನ್ನೆರೆದು ಬೆಳೆಸಿ ಮಹಾವೃಕ್ಷವನ್ನಾಗಿಸುವ ಸಾಮರ್ಥ್ಯವುಳ್ಳ ಭೀಮಶಕ್ತಿಯ ಮಹಾವ್ಯಕ್ತಿಯನ್ನು ಅರಸುವ ಕಾರ್ಯಕ್ಕೆ ಮೊದಲು ಮಾಡಿದರು. ಅವರ ಸಂಕಲ್ಪಶಕ್ತಿಯ ಪ್ರಬಲಪಾಶ 'ಲಕ್ಕೂರಿನ ರುದ್ರಪ್ಪ' ಎಂಬ ಅಘಟಿತಘಟನಾಸಮರ್ಥ ವ್ಯಕ್ತಿಯನ್ನು ಬಂಧಿಸಿ ಮಠಕ್ಕೆಂತಂದಿತು. ಈ ರುದ್ರಪ್ಪ ಮತ್ತಾರೂ ಅಲ್ಲ, ಅಸಾಧಾರಣ ಚೇತನಶಕ್ತಿಸಂಪನ್ನರೂ, ಅಘಟಿತ ಘಟನಾ ವಿಶೇಷವುಳ್ಳವರೂ ಆದ ಉದ್ದಾನ ಶಿವಯೋಗಿಗಳು.

*



# ಧರ್ಮದ ನಂದಾದೀಪ ಶ್ರೀ ಉದ್ದಾನ ಮಹಾಸ್ವಾಮಿಗಳು

- ವಿದ್ಯಾವಾಚಸ್ಪತಿ ಕವಿತಾಕೃಷ್ಣ
ಚಂದ್ರಮೌಳಿ ಬಡಾವಣೆ, ೫ನೇ ತಿರುವು,
ಕ್ಯಾತ್ಸಂದ್ರ, ತುಮಕೂರು - ೫೭೨೧೦೪.

**ಲೋ**ಕದಲ್ಲಿ ಎರಡು ಬಗೆಯ ವಸ್ತುಗಳು ಕಾಣ ಸಿಗುತ್ತವೆ. ಒಂದು ಮಕಮಲ್ಲಿನ ಬಟ್ಟೆಯಲ್ಲಿ ಕಟ್ಟಿದ ಗಾಜಿನ ಚೂರು. ಇನ್ನೊಂದು ಚಿಂದಿ ಬಟ್ಟೆಯಲ್ಲಿ ಕಟ್ಟಿಟ್ಟ ಅಮೂಲ್ಯ ರತ್ನ. ಹೀಗೆಯೇ ಲೋಕದಲ್ಲಿ ಎರಡು ಬಗೆಯ ಜನರು ಕಾಣಸಿಗುತ್ತಾರೆ. ಓರ್ವರು ಅಸಾಮಾನ್ಯರ ವೇಷಹೊತ್ತ ಸಾಮಾನ್ಯರು. ಮತ್ತೋರ್ವರು ಸಾಮಾನ್ಯನ ರೂಪಹೊತ್ತ ಅಸಮಾನ್ಯರು. ಶ್ರೀ ಸಿದ್ಧಗಂಗಾ ಕ್ಷೇತ್ರದ ಗುರುಪರಂಪರೆಯಲ್ಲಿ ಗೋಚರಿಸುವ ಶ್ರೀ ಉದ್ಧಾನ ಶಿವಯೋಗಿಗಳು ಎರಡನೆಯ ಗುಂಪಿನಲ್ಲಿ ಕಾಣಬರುವ ಮಹಾತ್ಮರು.

ಶ್ರೀ ಉದ್ದಾನ ಶಿವಯೋಗಿಗಳು ಅವತರಿಸಿದ್ದು ಲಕ್ಕೂರು ಎಂಬ ಕುಗ್ರಾಮದಲ್ಲಿ ಬೆಳೆದದ್ದು ಶರಣ ಸಜ್ಜನಿಕೆಯ ಕುಟುಂಬದಲ್ಲಿ ಕುರಿ-ಮೇಕೆಗಳನ್ನು ಕಾಯುತ್ತಾ, ತಿರುಗಿದ್ದು ಬೆಟ್ಟ ಕಾಡು. ಪಡೆದದ್ದು ಅನೂಹ್ಯ ಜ್ಞಾನ ಸಂಪಾದನೆ. ತಿರಸ್ಕರಿಸಿದ್ದು ಲೋಕ ವ್ಯಾಪಾರ. ಬೇಡವಾದದ್ದು ಹುಟ್ಟೂರ ವಾಸ. ಸೇರಿದ್ದು ಪುಣ್ಯಕ್ಷೇತ್ರ, ಲಭಿಸಿದ್ದು ಗುರುಗಳ ಅನುಗ್ರಹ, ನಿತ್ಯ, ಮಾಡಿದ್ದು ಯೋಗಾಭ್ಯಾಸ. ಮಡಿ ಮಾಡಿದ್ದು ಜನರ ಹೃನ್ಮನ. ಈ ಯತಿವರ ಕಟ್ಟಿದ್ದು ಮಹಾವಿದ್ಯಾಲಯ. ಬಿತ್ತಿದ್ದು ಅಕ್ಷರಜ್ಞಾನದೊಂದಿಗೆ ಸುಜ್ಞಾನ. ನಿತ್ಯ ನಿರಂತರ ನಡೆಸಿದ್ದು ದಾಸೋಹ, ಅನ್ಯಾಯ ಕಂಡಾಗ ಉಗ್ರ. ಒಮ್ಮೊಮ್ಮೆ ಹೂವಿನಷ್ಟು ಕೋಮಲ; ಮತ್ತೊಮ್ಮೆ ವಜ್ರದಷ್ಟು ಕಠಿಣ. ಮಾಡಿದ ಕಾಯಕ ಪರ್ವತಕ್ಕು ಮಿಗಿಲು, ಮಂತ್ರಶಕ್ತಿಯಲ್ಲಿ ಮಹಂತ ಪವಾಡ ಮಾಡಿದವರಲ್ಲಿ ಮಹಿಮಾನ್ವಿತ. ಯೋಗಿಗಳ ಯೋಗಿ ಈ ಉದ್ದಾನ ಶಿವಯೋಗಿ.



ಉದ್ದಾನ ಶಿವಯೋಗಿಗಳ ತಪದ ಫಲವಾಗಿ ಸಾಮಾನ್ಯವಾಗಿದ್ದ ಶ್ರೀ ಸಿದ್ಧಗಂಗಾ ಕ್ಷೇತ್ರ ಹಿಮಗಡಿಯಿಂದ ಕಡಲ ತಡಿಯ ತನಕ ಸವಿಸ್ತಾರವಾದ ಭಾರತದಲ್ಲಿ ಪ್ರಖ್ಯಾತಿ ಪಡೆಯಿತು. ಪುಣ್ಯಮಾತೆ ಸಿರಿ ಸಿದ್ಧಗಂಗೆ ಮತ್ತು ಪರಮಾತ್ಮ ಶ್ರೀ ಸಿದ್ಧಲಿಂಗೇಶ್ವರರು ನೆಲೆಸಿದ ಕೈಲಾಸವಾಯಿತು. ವಿದ್ಯಾಧಿದೇವತೆಯ ತವರಾಯಿತು. ಅನ್ನಪೂರ್ಣೇಶ್ವರಿಯ ಅವಾಸಸ್ಥಾನವಾಯಿತು. ಹಸಿದವರ ಒಡಲು ತುಂಬಿತು. ಮತಿಗೆ ಮಂಗಲ ಜ್ಞಾನ ನೀಡಿತು. ದೀನದಲಿತರ ಮಹಾಮನೆಯಾಯಿತು. ಭಕ್ತಾಭಿಮಾನಿಗಳಿಗೆ ಮುಕ್ತಿಯ ಮಂದಿರವಾಯಿತು. ತ್ರಿವಿಧ ದಾಸೋಹಸಿರಿಯ ಭಂಡಾರವಾಯಿತು. ನಡೆದಾಡುವ ದೇವರೆಂದು ಲೋಕವಿಖ್ಯಾತ 'ಅಭಿನವ ಬಸವಣ್ಣ'ನೆನಿಸುವ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳನ್ನು ಕಣ್ಣಾರೆ ಕಾಣುವ ಸದವಕಾಶ ಕಲ್ಪಿಸಿತು. ಭಕ್ತಿಯ ಪುಣ್ಯ ಚಿಲುಮೆ ಉಕ್ಕಿ ಹರಿಯಿತು. ಸಹಸ್ರ ಸಹಸ್ರ ವಿದ್ಯಾರ್ಥಿಗಳ ಮಹಾಮನೆ ಯಾಯಿತು ಕ್ಷೇತ್ರ ಅಧ್ಯಾತ್ಮಮಯವಾಯಿತು. ತಪೋಮಯವಾಯಿತು. ಮುಕ್ತಿಕಾಂತೆಯ ಮನೆಯಾಯಿತು.

## ಬದುಕು ಸಚಿತ್ರ ಆದರೂ ವಿಚಿತ್ರ

ಮಹಾತ್ಮರ ಬದುಕನ್ನು ಇದಮಿತ್ಥಂ ಎಂದು ಹೇಳಲು ಬರುವುದಿಲ್ಲ. ಕಾರಣ ಅವರ ಬದುಕು ಅಸಾಮಾನ್ಯವಾದುದು. ವ್ಯಕ್ತಿತ್ವ ಕೇವಲ ವ್ಯಕ್ತಿತ್ವವಾಗಿರದೆ ಅವರಲ್ಲಿ ಅದ್ಭುತ ಶಕ್ತಿಯಾಗಿರುವುದು. ಉದ್ಧಾನ ಶಿವಯೋಗಿಗಳ ಬದುಕು ಕೂಡ ಹೀಗೆಯೇ. ಪೂಜ್ಯರು ೧೮೬೭ರಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ, ನೆಲಮಂಗಲ ತಾಲ್ಲೂಕಿನ, ಸೋಂಪುರ ಹೋಬಳಿಯ ಲಕ್ಕೂರು ಗ್ರಾಮದಲ್ಲಿ ಉದಿಸಿದರು. ಅಲ್ಲಿನ ಪಟೇಲರ ಮನೆತನದ ಗಟ್ಟೆಪ್ಪ ಮತ್ತು ಮರುಳಮ್ಮ ಅವರಿಗೆ ಮಗನಾಗಿ ಜನಿಸಿದರು. ನೂರಾರು ಎಕರೆ ಭೂಮಿಯಿತ್ತು. ಮನೆತುಂಬ ದವಸ ಧಾನ್ಯ ತುಂಬಿತ್ತು. ಇವರ ಪೂರ್ವಾಶ್ರಮದ ಹೆಸರು ರುದ್ರಪ್ಪ. ಬಾಲ್ಯದಲ್ಲಿ ಅವರು ಮೇಕೆ-ಕುರಿಗಳನ್ನು ಕಾಯುವ ಕೆಲಸವನ್ನು ಒಪ್ಪಿಕೊಂಡರು. ನಿತ್ಯ ಹತ್ತಿರದ ನಿಜಗಲ್ ಬೆಟ್ಟಕ್ಕೆ ಹೋಗುತ್ತಿದ್ದರು. ಮೇಕೆಗಳನ್ನು ಮೇಯಲು ಬಿಟ್ಟು ಏಕಾಂತವಾಗಿ ಕೂರುತ್ತಿದ್ದರು. ಅವರಿಗೆ ದೇವರಪೂಜೆ, ಧ್ಯಾನ ಎಂದರೆ ಅದೇನೋ ಆನಂದ ಮೈಮರೆತು ಕುಳಿತುಬಿಡುತ್ತಿದ್ದರು. ಕಿರಿಯ ಮಗನೆಂದು ತಾಯಿ ತಂದೆ ಹುಟ್ಟೂರಿನ ಸಮೀಪದ ಕೂಲಿಮಠಕ್ಕೆ ಹಾಕಿದ್ದರು.





ಆದರೆ ಇವರಿಗೆ ಓದು ರುಚಿಸಲಿಲ್ಲ. ಕ್ರಮೇಣ ಶಾಲೆ ಬಿಟ್ಟರು. ಸುತ್ತಣ ಇದ್ದ ಬೆಟ್ಟ, ಗವಿ, ಗಡಿ, ಕಾಡು-ಮೇಡುಗಳಲ್ಲಿ ಸುತ್ತಾಡಿದರು. ಇವರ ವರ್ತನೆಗೆ ಅಣ್ಣ-ತಮ್ಮಂದಿರು ಜಿಗುಪ್ಸೆ ಪಟ್ಟರು. ಒಮ್ಮೆ ಕೂಡಿಹಾಕಿ ಘಾಸಿಗೊಳಿಸಲು ಅಂದೇ ಮನೆ ಬಿಟ್ಟು 'ಸಿದ್ಧಗಂಗೆಗೆ ಬಂದರು'.

ಆಗ ಪುಣ್ಯಮಯವಾದ ಈ ಕ್ಷೇತ್ರದಲ್ಲಿ ಶ್ರೀ ಅಟವಿ ಮಹಾಸ್ವಾಮಿಗಳು ಅಧಿಪತಿಗಳಾಗಿದ್ದರು. ಬಂದು ಸ್ವಾಮಿಗಳ ಶ್ರೀಚರಣದಲ್ಲಿ ಶರಣಾಗಿ ಶಿಷ್ಯವೃತ್ತಿ ಮಾಡಿದರು. ಬಾಣಸಿಗರಾಗಿ ಗುರುಗಳ ಪ್ರಸಾದಕ್ಕೆ ಅಣಿ ಮಾಡಿದರು. ದಾಸೋಹ ಸೇವೆಯಲ್ಲಿ ತನು ಸವೆಸಿದರು. ಕ್ಷೇತ್ರದ ಸೇವಾಕೈಂಕರ್ಯಗಳನ್ನು ಮಾಡುತ್ತಾ ನಿಷ್ಕಾಮಯೋಗಿಗಳಾಗಿ ದುಡಿದರು. ಶ್ರೀ ಉದ್ದಾನಶಿವಯೋಗಿ ನಾಮಧೇಯದಿಂದ ಮಠಾಧಿಪತಿಗಳಾದರು. ಅವರು ಲೌಕಿಕ ವಿದ್ಯೆಗಿಂತ ಆಧ್ಯಾತ್ಮಿಕ ವಿದ್ಯೆಯಲ್ಲಿ ಉನ್ನತ ಸಾಧನೆ ಮಾಡಿದರು. ಮಠದಲ್ಲಿ ಆರ್ಥಿಕ ಭಂಡಾರವಿರಲಿಲ್ಲ; ಇದ್ದದ್ದು ಕೇವಲ ಜೋಳಿಗೆ ಅಷ್ಟೆ ! ಶ್ರೀ ಉದ್ದಾನ ಶಿವಯೋಗಿಗಳ ತಪೋಬಲದಿಂದ ಜೋಳಿಗೆ ಅಕ್ಷಯ ಪಾತ್ರೆಯಾಯಿತು. ಮಠಕ್ಕೆ ಬಂದ ಭಕ್ತರಿಗೆ "ಬೆಟ್ಟಕ್ಕೆ ಹೋಗಿ ಬನ್ನಿ. ಊಟಕ್ಕೆ ಹೋಗಿ ಬನ್ನಿ, ಕೆಲಕಾಲ ವಿರಾಮ ಪಡೆದು ಬನ್ನಿ" ಎನ್ನುತ್ತಿದ್ದರು. ಬಂದ ಭಕ್ತರ ಕೈಯಲ್ಲಿ ಕಡೆಗೆ ರಾಗಿ ಬೀಸಿಸುತ್ತಿದ್ದರು. 'ಒಂದು ಸೇರು ರಾಗಿ ಬೀಸಿ ಹೋಗಿ' ಎಂದು ಅಪ್ಪಣೆ ಕೊಡಿಸುತ್ತಿದ್ದರು. ಇದರ ಗೂಡಾರ್ಥವಿಷ್ಟೇ : ಯಾರೇ ಆಗಲಿ ಎಲ್ಲಾದರು ಉಂಡರೆ, ಆ ಊಟದ ಋಣವನ್ನು ಒಂದಿಷ್ಟು ತೀರಿಸಿ ಹೋಗಬೇಕು. ನಾವು ಈ ಲೋಕಕ್ಕೆ ಬಂದವರು ಮಾತಾ-ಪಿತೃ ಋಣ, ಗುರು ಋಣ, ದೇವ ಋಣಗಳನ್ನು ತೀರಿಸಿಯೇ ಹೋಗಬೇಕೆಂಬುದು ಅವರ ಉದ್ದೇಶವಾಗಿತ್ತು. ಶ್ರೀ ಉದ್ದಾನ ಸ್ವಾಮಿಗಳು ಶ್ರೀಮಠದ ಋಣವನ್ನು ತಾವು ತೀರಿಸಿದರಲ್ಲದೆ ಅವರ ಶಿಷ್ಯರಿಂದಲೂ ತೀರಿಸುವ ಸತ್ಕಾರ್ಯ ಮಾಡಿದರು.

## ಶ್ರೀಗಳ ವಿಶಾಲ ದೃಷ್ಟಿ

'ಅನ್ನ ಇಟ್ಟ ನೆಲ ಚಿನ್ನದ ನೆಲ' ಆಗುವುದು ಎಂಬುದು ಶ್ರೀ ಉದ್ದಾನಶ್ರೀಗಳ ಆಶಯವಾಗಿತ್ತು. ಹೀಗಾಗಿ ಮಠ ಅನ್ನದಾಸೋಹ ಕೇಂದ್ರವಾಗಿ ರೂಪುಗೊಂಡಿತು. ೧೯೦೯ರಲ್ಲಿ ಮಹಾಶಿವರಾತ್ರಿಯ ಸಮಯದಲ್ಲಿ ಮೊದಲ ಬಾರಿಗೆ ರಥೋತ್ಸವವನ್ನು ಆರಂಭಿಸಿದರು. ಜನರ ಧಾರ್ಮಿಕ ಭಾವನೆ ಬಲಗೊಳಿಸುವ ಉತ್ಸವಾದಿ ಕಾರ್ಯಗಳಿಗೆ ನಾಂದಿ ಹಾಡಿದರು. ದನಗಳ ಜಾತ್ರೆಯಿಂದ ರೈತರ ಸಂಘಟನೆ ಬೆಳೆಯಲು ಅನುವು ಮಾಡಿಕೊಟ್ಟರು. ರಾಸುಗಳ ವಿನಿಮಯ ಮಾರಾಟದಿಂದ ದೃಷ್ಟಿವಿಜ್ಞಾನ ಬೆಳೆಯಲು ಸಹಕಾರಿಯಾದರು. ಬರುವ ಜನರಿಗೆ ಒಡಲು ತಣಿಸಿದರು. ಸಾಂಸ್ಕೃತಿಕ ಕಾರ್ಯಗಳಿಂದ ಮನರಂಜನೆ ಒದಗಿಸಿದರು. ರಾಸುಗಳಿಗೆ ನೀರು-ನೆರಳು ಒದಗಿಸುವಲ್ಲಿ ವಿಶೇಷ ಆಸ್ಥೆ ವಹಿಸಿದ್ದು ಅನುಕರಣೀಯ ಸಂಗತಿಯಾಗಿತ್ತು. ಜನರು ಮತ್ತು ರೈತರು ಮೊದಲು ಬಿಟ್ಟ ತರಕಾರಿ, ಬೆಳೆದ ಧವಸ ಧಾನ್ಯ, ಊಟದ ಎಲೆ ಹೊತ್ತು ತಂದು ಭಕ್ತಿ ಕಾಣಿಕೆ ಸಲ್ಲಿಸಿದರು.

ವಿದ್ಯೆಯಿಂದಲೇ ರಾಷ್ಟ್ರದ ಪ್ರಗತಿ ಎಂಬುದು ಶ್ರೀಗಳ ಮಹದಾಶಯವಾಗಿತ್ತು. ಎಲ್ಲಾ ಜನಾಂಗದವರಿಗೂ ಆಶ್ರಯ ನೀಡಿದರು. ೧೯೧೭ರಲ್ಲಿ ಮಠದಲ್ಲಿ ಸಾರ್ವಜನಿಕ ಉಚಿತ ಅಶನ ವಸತಿಯ ವಿದ್ಯಾರ್ಥಿನಿಲಯ ತೆರೆದರು. ಇದು ಶ್ರೀ ಉದ್ದಾನ ಶಿವಯೋಗಿಗಳು ಸಮಕಾಲೀನ ಧರ್ಮಕ್ಕೆ ಸ್ಪಂದಿಸಿದ ರೀತಿ. ಸರ್ಕಾರ ಸಾರ್ವಜನಿಕ ವಿದ್ಯಾರ್ಥಿ ನಿಲಯ ತೆರೆಯಲು ಹೆದರುತ್ತಿದ್ದ ಕಾಲದಲ್ಲಿ ಶ್ರೀಗಳ ಈ ಕ್ರಾಂತಿಕಾರಕ ಯೋಜನೆ ಮಾನವೀಯ ನೆಲೆಗಟ್ಟಿನ ಮೇಲೆ ಮೂಡಿಬಂದದ್ದು. ಮಠ ಸರ್ವಜನಾಂಗದ ತೋಟವಾಗಿ ರೂಪುಗೊಳಿಸಿದ ಕೀರ್ತಿ ಪೂಜ್ಯ ಉದ್ದಾನ ಶ್ರೀಗಳದು.

ಸಂಸ್ಕೃತಭಾಷೆ ಸಕಲ ಸಂಪನ್ನವಾದ ಭಾಷೆ, ಶ್ರೀಮಂತ ಭಾಷೆ, ಜಗತ್ತಿನಲ್ಲಿರುವುದೆಲ್ಲಾ ಅದರಲ್ಲಿತ್ತು. ಸಂಸ್ಕೃತ ಕಲಿಕೆಯಿಂದ ಮಾನವ ಮಾನಸಿಕವಾಗಿ, ಬೌದ್ಧಿಕವಾಗಿ ಬೆಳೆಯುತ್ತಾನೆ. ಸಂಸ್ಕೃತವು ಅರಿವಿನ ಆಗರ, ನಮ್ಮ ಸಂಸ್ಕೃತಿಯ ಹೃದಯ ಎಂಬ ಕಾರಣದಿಂದ ಶ್ರೀಮಠದಲ್ಲಿ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಪಾಠಶಾಲೆಯನ್ನು ಅಂದೇ ಆರಂಭಿಸಿದರು. ಅದು ಇಂದು ಮಹಾಪಾಠಶಾಲೆಯಾಗಿ ವಿರಾಜಿಸುತ್ತ ಕ್ಷೇತ್ರವನ್ನು ಪಂಡಿತ ಕ್ಷೇತ್ರ, ಶಾರದಾಮಂದಿರ ಎಂದೆನಿಸಿದೆ. ಎಲ್ಲಾ ಜನಾಂಗದವರೂ ಸಂಸ್ಕೃತಭಾಷೆ ಕಲಿಯುವ ಅವಕಾಶ ಕಲ್ಪಿಸಿದ ಶ್ರೀಗಳವರ ದೂರದೃಷ್ಟಿ ಕ್ರಾಂತಿಕಾರಕವಾದುದು. ಮಿಗಿಲಾಗಿ ಮಾನವೀಯತೆಯಿಂದ ಕೂಡಿದಂತದ್ದು.

ತಮ್ಮ ೨೫ನೇ ವಯಸ್ಸಿನಲ್ಲಿಯೇ ಮಠಾಧಿಪತಿಗಳಾದ ಶ್ರೀ ಉದ್ದಾನ ಶ್ರೀಗಳವರು ೮೦ನೆಯ ವಯಸ್ಸಿನ ತನಕ ಕ್ಷೇತ್ರದ ಸರ್ವಾಂಗೀಣ ಪ್ರಗತಿಗಾಗಿ ಅಹರ್ನಿಶಿ ದುಡಿದರು. ಶ್ರಮದ ದುಡಿಮೆಯೇ ದೇವರು ಎಂದು ಎಲ್ಲರಿಗೂ ತೋರಿಸಿಕೊಟ್ಟರು. ಶ್ರೀಗಳ ದೃಷ್ಟಿ ಬಹು ವಿಶಾಲವಾದುದಾಗಿತ್ತು.

## ಗುರುಕಾರುಣ್ಯದ ಶಿಶು

ಶ್ರೀಗಳು ಮರುಳಾರಾಧ್ಯರನ್ನು ಉತ್ತರಾಧಿಕಾರಿಗಳನ್ನಾಗಿ ನೇಮಿಸಿಕೊಂಡಿದ್ದರು. ಅವರು ೧೯೩೦ರಲ್ಲಿ ಶಿವೈಕ್ಯರಾದರು. ಆಗ ಶತಮಾನದ ಶಕಪುರುಷರೆನಿಸಿದ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳನ್ನು ಆರಿಸಿಕೊಂಡರು. ಶ್ರೀ ಉದ್ದಾನ ಶ್ರೀಗಳ ಕನಸನ್ನು ನನಸು ಮಾಡಿದ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳ ಪೂರ್ವಾಶ್ರಮದ ಹೆಸರು ಶಿವಣ್ಣ. ಅವರ ಊರು ಬೆಂಗಳೂರು ಜಿಲ್ಲೆ, ಮಾಗಡಿ ತಾಲ್ಲೂಕು, ವೀರಾಪುರ, ಅದು ಶಿವಗಂಗೆಯ

ಸನಿಹದಲ್ಲಿದೆ. ಶ್ರೀ ಶ್ರೀಗಳು ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ವ್ಯಾಸಂಗ ಮಾಡಿ ಬಿ.ಎ. ಪದವೀಧರರಾಗಿದ್ದರು. ಶ್ರೀ ಉದ್ದಾನ ಶಿವಯೋಗಿಗಳ ಬಳಿ ೧೧ ವರ್ಷಗಳ ಕಾಲ ಶಿಷ್ಯತ್ವ ಮಾಡಿ, ಅವರ ಮಾರ್ಗದರ್ಶನದಲ್ಲಿ ನಡೆದು, ಶ್ರೀ ಶಿವಕುಮಾರ ಮಹಾಸ್ವಾಮಿಗಳೆಂಬ ದಿವ್ಯನಾಮದಿಂದ ಬೆಳಗುತ್ತಿದ್ದಾರೆ.

ನಡೆದಾಡುವ ದೇವರೆನಿಸಿದ ಶ್ರೀ ಶ್ರೀಗಳವರ ಸಾಧನೆಯಿಂದ ಶ್ರೀಕ್ಷೇತ್ರದ ಎಂಟು ಸಾವಿರ ವಿದ್ಯಾರ್ಥಿಗಳ ಬೃಹತ್ ವಸತಿ ನಿಲಯವಾಯಿತು. ವಿವಿಧ ಶಾಲೆ–ಕಾಲೇಜುಗಳಿಂದ ವಿಜೃಂಭಿಸಿತು. ಸಾವಿರಾರು ಮಂದಿ ಗುರುವೃಂದ, ಸಂಸ್ಕೃತಭಾಷಾ ಶಿಕ್ಷಣದೊಂದಿಗೆ, ಆಧುನಿಕ ಶಿಕ್ಷಣವು ಸಹ ಜೊತೆಗೂಡಿತು. ಕನ್ನಡ ನಾಡಿನ ತುಂಬಾ ನಾನಾ ವಿಧದ ಶಾಲೆಗಳು ತೆರೆಯಲ್ಪಟ್ಟವು. ಶ್ರೀ ಶ್ರೀಗಳ ತಪದ ಪ್ರಭಾವದಿಂದ ಸುವರ್ಣಯುಗ ಆರಂಭವಾಯಿತು. ಶ್ರೀ ಸಿದ್ಧಗಂಗಾ ಮಠವು ದಕ್ಷಿಣದ ಶಾಂತಿನಿಕೇತನ ಎನಿಸಿತು. ಇಂದು ಶ್ರೀಕ್ಷೇತ್ರವನ್ನು ಹೋಲಿಸುವುದಾದರೆ ಸಾಗರಕ್ಕೆ ಹೋಲಿಕೆ ಸಾಗರ, ಗಗನಕ್ಕೆ ಹೋಲಿಕೆ ಗಗನ ಹೇಗೋ ಹಾಗೆಯೇ ಶ್ರೀ ಸಿದ್ಧಗಂಗಾಕ್ಷೇತ್ರಕ್ಕೆ ಮಾತ್ರವೇ ಹೋಲಿಸಬಹುದಷ್ಟೆ! ಶ್ರೀ ಶ್ರೀಗಳನ್ನು ಹೋಲಿಸುವುದಾದರೆ ೧೨ನೆಯ ಶತಮಾನ ಅಣ್ಣಬಸವಣ್ಣನವರಿಗೆ ಮಾತ್ರವೇ ಹೋಲಿಸಬಹುದಾಗಿದೆ.

ಶ್ರೀ ಉದ್ದಾನ ಶಿವಯೋಗಿ ಧರ್ಮದ ತಳಹದಿಯ ಮೇಲೆ ಲೋಕಕಲ್ಯಾಣ ಕಾರ್ಯ ಮಾಡಿದರು. ಅನ್ನ–ಜ್ಞಾನಗಳೆರಡನ್ನು ಬಂದವರಿಗೆ ಉಣಬಡಿಸಿದರು. 'ಸಿದ್ಧಗಂಗಗೆ ಹೋದ್ರೆ (ಪ್ರಸಾದಕ್ಕೆ) ಎಂಗೆ ಅನ್ನಬೇಕಾ' ಎಂಬ ನಾಣ್ನುಡಿ ಹುಟ್ಟುವಂತೆ ಮಾಡಿದರು. ಈ ಮಹಾತಪಸ್ವಿಗಳು ೧೯೪೧ನೆಯ ಇಸವಿ ಜನವರಿ ೧೧ರಂದು ಲಿಂಗೈಕ್ಯರಾದರು.

*ಉದಯರವಿಯಾಗಿ ಹೊಂಗಿರಣ ಬೀರಿದ*
*ವರ ಗುರುದೇವ ಶ್ರೀ ಉದ್ದಾನ ಶಿವಯೋಗಿ ।*
*ಮಹಾಮಹಿಮರ ಕನಸು ನನಸಾಗಿ*
*ಸುಕ್ಷೇತ್ರ ಸಿದ್ಧಗಂಗೆ ಆಗಿದೆ ಜನಾನುರಾಗಿ ॥*

*ಅನ್ನ–ಜ್ಞಾನದ ಹೊಳೆ ನಿತ್ಯ ಹರಿದಿದೆ ಹುಲುಸಾಗಿ*
*ಮನವ ಮಡಿಮಾಡಿ ತನುವ ಗುಡಿಮಾಡಿದೆ ।*
*ಭವ್ಯ ಭಾರತದ ಭವ್ಯ ಇತಿಹಾಸದಲ್ಲಿ*
*ಧರ್ಮದ ಪತಾಕೆಯ ನಭೋಮಂಡಲದಿ ಹಾರಿಸಿದೆ ॥*

### ಋಣ ತೀರಿಸುವ ಸಂಕಲ್ಪ

ಸಿದ್ಧಗಂಗಾಮಠಕ್ಕೆ ಭಕ್ತಾದಿಗಳು ಯಾರೇ ಬರಲು ಪೂಜ್ಯ ಉದ್ದಾನಸ್ವಾಮಿಗಳು ಪ್ರೀತಿಯಿಂದ ಸ್ವಾಗತಿಸುತ್ತಿದ್ದರು. ನಂತರ ಮುತ್ತಿನಂತಹ ಮೂರು ಮಾತು ಹೇಳುತ್ತಿದ್ದರು.

*ಬೆಟ್ಟಕ್ಕೆ ಹೋಗಿ ಬನ್ನಿ*
*ಊಟಕ್ಕೆ ಹೋಗಿ ಬನ್ನಿ*
*ವಿರಾಮ ಪಡೆದು ಬನ್ನಿ*

ಬೆಟ್ಟಕ್ಕೆ ಹೋಗಿ ಶ್ರೀ ಸಿದ್ಧಗಂಗೆಯ ಪುಣ್ಯ ಜಲಕುಂಡಕ್ಕೂ, ಸಿದ್ಧಲಿಂಗೇಶ್ವರರಿಗೂ ಪೂಜೆ ಸಲ್ಲಿಸ ಬಂದ ಭಕ್ತಾದಿಗಳಿಗೆ ಹೋಗಿ ಮೊದಲು ಊಟ ಮಾಡಿ ಬನ್ನಿ ಎಂದು ಪ್ರಸಾದ ನಿಲಯಕ್ಕೆ ಕಳುಹಿಸುತ್ತಿದ್ದರು. ಊಟ ಮುಗಿಸಿ ಸಂತೃಪ್ತರಾಗಿ ಬಂದವರನ್ನು ಮರದ ನೆರಳಿನಲ್ಲಿ ಕೂರಿಸಿ ವಿರಾಮ ನೀಡುತ್ತಿದ್ದರು. ಆ ನಂತರ ಪೂಜೆ–ಪ್ರಸಾದ–ವಿರಾಮ–ಪಡೆದ ಭಕ್ತರು ಬಳಿಗೆ ಬಂದಾಗ ಎಲ್ಲಿ, ಒಂದಿಷ್ಟು ರಾಗಿ ಬೀಸಿ ಹೋಗಿ' ಎಂದು ಕಡ್ಡಿ ಮುರಿದಂತೆ ಹೇಳುತ್ತಿದ್ದರಲ್ಲದೆ, ಒಮ್ಮೊಮ್ಮೆ ಬೀಸಲು ರಾಗಿಯ ಕಲ್ಲಿನ ಮುಂದೆ ಕುಳಿತು ತಾವೇ ಬಳ್ಳಗಟ್ಟಲೆ ಬೀಸುತ್ತಿದ್ದರು.

ಶ್ರೀ ಶಿವಕುಮಾರಸ್ವಾಮಿಗಳು ಈ ದೃಶ್ಯವನ್ನು ದಿನ ನಿತ್ಯ ನೋಡುತ್ತಿದ್ದರು. ಆದರೆ ಅದು ಬಿಡಿಸಿದ ಒಗಟಾಗಿತ್ತು. ಭಕ್ತರನ್ನು ಪ್ರೀತಿಯಿಂದ ಊಟಕ್ಕೆ ಕಳುಹಿಸಿ, ಆನಂತರ ಏಕೆ ಹೀಗೆ ಮಾಡುತ್ತಿದ್ದಾರೆ? ಒಂದು ದಿನ ನೇರವಾಗಿ ಹಿರಿಯ ಶ್ರೀಗಳನ್ನು ಕೇಳಿದರು. ಆಗ ಅವರು ಹೀಗೆ ಉತ್ತರಿಸಿದರಂತೆ :

'ನಾವು ಅಸಂಖ್ಯಾತ ನೆರವುಗಳಿಂದ ಬಾಳುತ್ತೇವೆ, ಬದುಕುತ್ತೇವೆ. ಜನರಿಗೆ ಭೂಮಿ, ಗಾಳಿ, ನೀರು, ಮರಗಿಡ, ಆಕಾಶಾದಿಗಳೂ ಉಪಕಾರಿಗಳಾಗಿವೆ. ಅವುಗಳ ಕೃಪೆಯಿಂದ ಬೆಳೆದ ನಾವು ಅವುಗಳ ಋಣ ತೀರಿಸಲೇ ಬೇಕು. ಮಾನವ ಋಣಮುಕ್ತನಾದರೆ ಸುಖಕ್ಕೆ ಸೋಪಾನ. ಲೋಕ ಕಲ್ಯಾಣ. ಇಲ್ಲಿ ಪ್ರಸಾದ ಸ್ವೀಕರಿಸಿ, ಸಂತೃಪ್ತರಾದ ಮೇಲೆ ಋಣ ತೀರಿಸಲು ಒಂದಿಷ್ಟು ಸೇವೆ ಮಾಡುವುದು ತಪ್ಪಲ್ಲ. ಋಣಮುಕ್ತನಾಗುವುದು ಮಾನವನ ಕರ್ತವ್ಯ. ಆದುದರಿಂದಲೇ ಉಂಡ ಭಕ್ತರಿಗೆ ರಾಗಿ ಬೀಸಲು ಹೇಳುತ್ತೇನೆ. ನಾನೂ ಬೀಸುತ್ತೇನೆ. ನೀನೂ ಕೂಡ ಋಣ ತೀರಿಸಬೇಕು. ನೋಡೋಣ. ಹೇಗೆ ಋಣ ತೀರಿಸುವೆಯೋ''?

ಹಿರಿಯ ಶ್ರೀಗಳ ಬಾಯಿಂದ ಬಂದ ಅಣಿಮುತ್ತುಗಳನ್ನು ಕೇಳಿ ಶಿವಕುಮಾರ ಸ್ವಾಮಿಗಳಿಗೆ ಕಾಯಕತತ್ವದ ಹಿರಿಮೆ ಅರಿವಾಯಿತು. ಕೋಟಿ ಮಿಂಚು ಫಳಾರಿಸಿದಂತಾಯಿತು. 'ಋಣಮುಕ್ತರಾಗಿ ಬಾಳುವುದು ಮಾನವ ಕೋಟಿಯ ಆದ್ಯ ಕರ್ತವ್ಯ' ಎಂಬ ಗುರುವಾಣಿ ಅವರ ಭವ್ಯ ನಡೆಯಲ್ಲಿ ದಾರಿದೀಪವಾಯಿತು.

ಅಂದಿನಿಂದ ಶ್ರೀಗಳು ಮಾತೃಋಣ. ಗುರುಋಣ, ರಾಷ್ಟ್ರಋಣ, ಅನ್ನಋಣಗಳನ್ನು ತೀರಿಸುವ ಸಂಕಲ್ಪ ಮಾಡಿದರು. ಗುರು ತೋರಿದ ಹಾದಿಯಲ್ಲಿ ಮುನ್ನಡೆದು, ಕ್ಷೇತ್ರದ ಇತಿಹಾಸದ ಪುಟಗಳಲ್ಲಿ ನವ ದರ್ಶನ ತತ್ವವನ್ನು ಸುವರ್ಣಾಕ್ಷರಗಳಲ್ಲಿ ಬರೆದಿಡುವಂತೆ ಮಾಡಿದರು.

*









## ಸಂಕ್ರಾಂತಿಯ ಸೊಬಗು

– ಡಾ. ಎಂ.ಜಿ. ನಾಗರಾಜ್
೨೨೧, 'ಅನರ್ಘ್ಯ', ಶ್ರೀ ಜಚನಿ ಕೃಪೆ,
೬೮ನೇ ಕ್ರಾಸ್, ೪ನೇ ಬ್ಲಾಕ್, ರಾಜಾಜಿನಗರ,
ಬೆಂಗಳೂರು – ೫೬೦ ೦೧೦.

ಶಿಶಿರಋತು ಚಳಿಯ ಮುಖವಾಣಿ. ಸಂಕ್ರಾಂತಿ ಚಳಿಯ ನಡುಗಿಸುವ ಸ್ವಭಾವಕ್ಕೆ ಬಿಸಿಲಿನ ಕಚಕುಳಿಯನ್ನೂ ಇಟ್ಟು ಹಿತ ತರುವ ಸಮಯ ಅರ್ಥಾತ್ ಚಳಿಗೆ ನಡುಕಗಳನ್ನು ತಡೆದು ಹಿತದ ಬಿಸಿಯನ್ನು ತರುವ ನೇಸರನ ನೈಸರ್ಗಿಕ ಕಾಯಕಕ್ಕೆ ನಾಂದಿ ಇಡುವ ಸಮಯ, ಶಿವರಾತ್ರಿಯಿಂದ ಮರೆಯಾಗುವ ಚಳಿಗೆ, ಸಂಕ್ರಾಂತಿಯಿಂದಲೇ ಬೀಳ್ಕೊಡುಗೆ, ಚಳಿಯಿಂದಾಗಿ ಆವರಿಸಿದ್ದ ಜಡಕ್ಕೆ ಬಿಸಿಲಿನ ಚಬುಕ ಚಟುವಟಿಕೆಗೆ ಸ್ಪಂದನವಿಡುತ್ತಿದೆ. ಅಂತಾಗಿ ಅದು ನಿಸರ್ಗದ ನೇವರಿಕೆಯೆ.



ಸಂಕ್ರಾಂತಿ ಸುಗ್ಗಿಯ ಹಬ್ಬವೂ ಹೌದು. ಸೂರ್ಯನು ಪಥ ಬದಲಿಸುವ ಚರ್ಯೆಯನ್ನು ಮಾನಿಸಿ ಆರಾಧಿಸುವ ಹಬ್ಬವೂ ಹೌದು. ಜಾನಪದ ನೆಲೆಯಲ್ಲಿ ಬಹು ಪ್ರಾಚೀನ ಕಾಲದಲ್ಲಿಯೇ ಮೂಡಿ ಬಂದ ಹಬ್ಬವೂ ಹೌದು. ಸೂರ್ಯಾರಾಧನೆಯ ಒಂದು ಸಂಕೇತವೂ ಹೌದು. ಬುಡಕಟ್ಟುಗಳಲ್ಲಿನ ಆಚರಣೆಯಿಂದ ಹೊರಟು ಜಾನಪದದಲ್ಲಿ, ಶಿಷ್ಟಪದದಲ್ಲಿ ವೈವಿಧ್ಯಮಯವಾಗಿ ಈ ಹಬ್ಬದಾಚರಣೆ ಮೂಡಿದೆ. ಸೂರ್ಯ ಮಂಡಲದ ಮಧ್ಯೆ ಶಿವನಿಗೂ ಪ್ರಾಮುಖ್ಯ; 'ಸೂರ್ಯಮಂಡಲ ಮಧ್ಯೇ ಸಾಂಬಂ.'

ಭಾರತದ ವಿವಿಧ ಉಪ ಸಂಸ್ಕೃತಿಗಳ ಜಾಯಮಾನವನ್ನು ಅರಗಿಸಿಕೊಂಡು ಮೊತ್ತವಾದ ಸಂಸ್ಕೃತಿ, ಭಾರತೀಯ ಸಂಸ್ಕೃತಿ, ಬುಡಕಟ್ಟು ಮೂಲವಾದ ಭಾರತದ ಅಂದಿನ ಬೆಲೂಚಿ ಸ್ಥಾನದ ಗ್ರಾಮೀಣ ನೆಲೆಯ ಜೋಬ್, ನಾಲ್ ಸಂಸ್ಕೃತಿಯಿಂದ ಪ್ರೇರಣಗೊಂಡ ಸೈಂಧವ ಸಂಸ್ಕೃತಿಯಲ್ಲಿ ಸಂಕ್ರಾಂತಿಯ ಆಚರಣೆಯ ವಿಕಸಿತ ಬೇರುಗಳಿವೆ. ಮುಂದಿನ ವೈದಿಕ ಸಂಸ್ಕೃತಿಯೂ ಇದರಿಂದ ಪ್ರಭಾವಿತವಾಗಿ ಭಾರತೀಯ ಸಂಸ್ಕೃತಿಯಲ್ಲಿ ತನ್ಮಯವಾಯಿತು. ಹೀಗಾಗಿ ಭಾರತೀಯ ಸಂಸ್ಕೃತಿಯಲ್ಲಿ ಬೇರುಗೊಂಡ ಒಂದು ಪ್ರಾಚೀನ, ಸಮನ್ವಯ ಆರಾಧನಾ ಸಂಕೇತವಾಗಿ ಈ ಹಬ್ಬವಿದೆ. ವ್ಯವಸಾಯ ಸಂಸ್ಕೃತಿಯನ್ನು ಎತ್ತಿಹಿಡಿದ ಹಬ್ಬವಾಗಿದೆ.

ಸಂಕ್ರಮಣ ಎಂದರೆ ಒಟ್ಟಿಗೆ ಸಾಗುವಿಕೆ, ಸಹಗಾಮಿಯಾಗಿ ಸಾಗುವಿಕೆ; ಸಂಕ್ರಮಣ ಕಾಲ ಎಂದರೆ ಸಂಧಿಕಾಲ, ಪರ್ವಕಾಲ, ಪ್ರಗತಿಕ್ರಾಂತಿಕಾಲ ಎಂಬರ್ಥಗಳಿವೆ. ಸೂರ್ಯ ಒಂದು ರಾಶಿಯಿಂದ ಇನ್ನೊಂದು ರಾಶಿಗೆ ದಾಟುವ ದಿನವಿದು. ಸೂರ್ಯ ಮಕರರಾಶಿಗೆ ಪ್ರವೇಶಿಸುವ ದಿನವಾದ್ದರಿಂದ ಮಕರಸಂಕ್ರಾತಿ ಎನ್ನುವುದುಂಟು. ಸೂರ್ಯನು ಉತ್ತರದತ್ತ ಹೊರಳುವ ಆರಂಭದೆಸೆಯನ್ನು (ಉತ್ತರಾಯಣ) ಸೂಚಿಸುವ ಕಾರಣ ಉತ್ತರಾಯಣ ಸಂಕ್ರಾಂತಿ, ಉತ್ತರಾಯಣ ಪುಣ್ಯಕಾಲ ಎನ್ನುವುದುಂಟು. ಈ ಹಬ್ಬದಲ್ಲಿ ವಿಶೇಷವಾಗಿ ಎಳ್ಳನ್ನು ವಿವಿಧ ರೀತಿಯಲ್ಲಿ ಬಳಸುವ ಕಾರಣ ತಿಲಸಂಕ್ರಾಂತಿ (ಎಳ್ಳು ಸಂಕ್ರಾಂತಿ) ಎಂದು ಈ ಹಬ್ಬ ಕರೆಸಿಕೊಂಡಿದೆ. ಖಗೋಳ ವಿಜ್ಞಾನದ ರೀತ್ಯಾ ಸೂರ್ಯ ದಕ್ಷಿಣಾಯನ ಮುಗಿಸಿ ಉತ್ತರಾಯಣ ಪ್ರಾರಂಭಿಸುವ ಮಹಾಪರ್ವದಿನವಾಗಿ ಮಕರರಾಶಿ ಪ್ರವೇಶವೆಂದು ಮಕರ ಸಂಕ್ರಮಣ ಎನ್ನುವುದೂ ಇದೆ. ಮಕರ ಸಂಕ್ರಮಣದ ಅಧಿದೇವತೆ, ಪ್ರಗತಿ ಮಾರ್ಗಗಳ ಸಾಧಿಸುವ ಪುರುಷ, 'ಕ್ರಾಂತಿಕಾರಿ' ಎಂಬ ಅರ್ಥದಲ್ಲಿ 'ಸಂಕ್ರಾಂತಿ ಪುರುಷ' ಶಬ್ದ ಬಳಕೆಯಲ್ಲಿದೆ. ಭೂಮಧ್ಯರೇಖೆಯ ಉತ್ತರಕ್ಕೆ ಅಥವಾ ದಕ್ಷಿಣಕ್ಕೆ ಸೂರ್ಯ ಚಲಿಸುವುದನ್ನು ಸೂಚಿಸುವಂತೆ ಭೂಪಟದ ಅಥವಾ ಭೂಗೋಲದ ಮೇಲೆ ಎಳೆದಿರುವ ಗೆರೆಗಳಿರುತ್ತವೆ; ಸೂರ್ಯ ಮಂಡಲದ ಯಾವ ಸ್ಥಳಗಳ ಮೇಲೆ ಹುಟ್ಟಿ ಸಂಚರಿಸಿ ಮುಳುಗು ವಂತೆ ತೋರ ಲಾಗುವ ಆ ಸ್ಥಳಗಳನ್ನು ಭೂಗೋಳದ ಸುತ್ತಲೂ ಬರೆದಿರುವಂತೆ ಭಾವಿಸ ಲಾದ ಆ ಗೆರೆಗಳನ್ನು 'ಸಂಕ್ರಾಂತಿ ವೃತ್ತಗಳು' ಎನ್ನುತ್ತಾರೆ.



ಸೈಂಧವ ಸಂಸ್ಕೃತಿಯ ಜನರು–ಅಂದರೆ ಐದು ಸಾವಿರ ವರ್ಷದ ಹಿಂದಿನ ಜನರು ಎಳ್ಳನ್ನು ಭಾರತದ ಪ್ರಮುಖ ಬೆಳೆಯಾಗಿ ಬೆಳೆಯುತ್ತಿದ್ದರು. ನಿತ್ಯ ಜೀವನದಲ್ಲಿ ರಘ್ತು ಸಂದರ್ಭದಲ್ಲಿ ಎಳ್ಳಿನ ವ್ಯವಹಾರವಿತ್ತು. ಹೀಗಾಗಿ ಎಳ್ಳು ಆಗಲೇ ಹಬ್ಬದ ಒಂದು ಅಂಗವಾಗಿದ್ದಿರಬೇಕು. ಹೀಗಾಗಿ ಎಳ್ಳು ಬೆಲ್ಲ ಕೊಡುವ ಆಚರಣೆ ಭಾರತದ ಅತ್ಯಂತ ಪ್ರಾಚೀನ ಸಾಂಸ್ಕೃತಿಕ ಆಚರಣೆ ಆಗಿದೆ. ಅದು ಪಾಪ ಪರಿಹಾರವಂತೆ ಅರ್ಥವತ್ತಾಗಿದೆ; ವೈಜ್ಞಾನಿಕವಾಗಿದೆ. ಚಳಿಯಲ್ಲಿ ಬೇಕಾದ ಶಕ್ತಿಗೆ ಎಳ್ಳೊಂದು ತೈಲಪುಷ್ಟಿ. ಬೆಲ್ಲ ಅದರ ರುಚಿವೃದ್ಧಿಗೆ ಹೊಂದಿಕೆಯಾದ ವಸ್ತುವಷ್ಟೇ ಅಲ್ಲ, ಶಕ್ತಿ ಘಟಕವೂ ಹೌದು. ಎಳ್ಳು ಕಡಲೆಬೀಜ, ಬೆಲ್ಲ ಈ ಕೂಟದ ರುಚಿ ಬೇರಾವ ವಸ್ತು ಮಿಶ್ರಣದ ತಿನಿಸು ಒದಗಿಸದ ರುಚಿ ಆಗಿದೆ. ಚಳಿಗೆ ಮುಟ್ಟಿದರೆ ಮುನಿಯಾಗಿದ್ದ ದೇಹ ಈ ಎಳ್ಳು ಬೆಲ್ಲ ತಿನಿಸಿನೊಡನೆ, ನೇಸರನ ನವಕಿರಣಗಳ ಚುಮುಚುಮು ಬಿಸಿಲಿನ ಶಾಖದೊಡನೆ ಸಂಕ್ರಾಂತಿಯಿಂದ ಚುಟವಟಿಕೆಯೊಡನೆ ಪಲ್ಲವಿಸುತ್ತದೆ. ಲವಲವಿಕೆ ತೆರೆದ ಹೊಸಿಲ ಬಾಗಿಲಾಗುತ್ತದೆ.



'ಎಳ್ಳುಬೆಲ್ಲ ಕೊಟ್ಟು ಒಳ್ಳೆಯ ಮಾತಾಡು' ಎಂಬುದು ಕನ್ನಡದ ಸುವಿಖ್ಯಾತ ಜನನುಡಿ ನಾಣ್ಣುಡಿ. ಇದರಲ್ಲಿ ಪ್ರಾಚೀನ ಸಂಸ್ಕೃತಿಯ ಅರ್ಥವಿದೆ; ಸಮನ್ವಯ ವಿದೆ; ಸಾಮರಸ್ಯವಿದೆ. ರುಚಿಸಖ್ಯವಿದೆ; ರುಚಿಸೌಖ್ಯವಿದೆ. ಋತುಮಾನದ ವೈಜ್ಞಾನಿಕ ಕಾಳಜಿ ಇದೆ. ಚರಿತ್ರೆ ಇದೆ. ಜಾನಪದ ವಿಷಯವಿದೆ. ನುಡಿಜಾಣ್ಮೆ ಇದೆ. ಸಂಘರ್ಷವನ್ನು ತಪಿಸಿ ಸಾಮರಸ್ಯ ಸಾಧಿಸಿದ ಸಾಂಕೇತಿಕ ಸಾಂಸ್ಕೃತಿಕ ನೆಲಗಟ್ಟನ್ನು ಹೊಂದಿದೆ. ಅಂದರೆ ಒಂದು ಕಾಲಕ್ಕೆ ಸಂಘರ್ಷ ಸಂಭವಿಸಿದ್ದಿರಬೇಕು. ಸಂಕ್ರಾಂತಿಯ ಪರ್ವಕಾಲ–ಸಂಧಿಕಾಲವನ್ನು ಆದರಿಸಿಕೊಂಡು ಆ ಸಂಘರ್ಷವನ್ನು ನಿರಸನಗೊಳಿಸಲು ಕಂಡುಕೊಂಡ ಸಾಂದರ್ಭಿಕ ಸಮಾಧಾನ–ಉಪಾಯವನ್ನು (built in mechanism) ಈ ಹಬ್ಬದ ತಿನಿಸಿನ ಮೂಲಕವೂ ಮಾಡಿಕೊಂಡ ಸಂಕೇತ ಇಲ್ಲಿ ಕಾಣುತ್ತದೆ. ಇಲ್ಲವಾಗಿದ್ದರೆ ಕೇವಲ ಎಳ್ಳು ಬೆಲ್ಲ ಕೊಟ್ಟು ಒಳ್ಳೆಯ ಮಾತಾಡುವ ಪ್ರಮೇಯ ರುಚಿಯಷ್ಟಕ್ಕೆ ನಿಂತಂತಾಗುತ್ತಿತ್ತು. ಅದೊಂದು ಭಾಷಾಸಂಸ್ಕೃತಿ; ಸಾಂಸ್ಕೃತಿಕ ನಿವೇದನೆ; ಶುಭ ಹಾರೈಕೆ ಆಗಿದೆ ಎಂಬುದು ಮುಖ್ಯ.



ಎಳ್ಳಿಗೆ ಬೆಲ್ಲ ಬೆರಸಿದರೆ ಕಡಲೆ ಬೀಜವೂ ಸೇರಿರುವ ಕಾರಣ. ಅದನ್ನು ತಿಂದಾಗ ಉಂಟಾಗುವ ಜಠರಾನಿಲ ವನ್ನು ನುಂಗಿಕೊಳ್ಳುವ (absorbtion) ಬೆಲ್ಲಕ್ಕೆ ವಿಶೇಷವಾಗಿದೆ. ಅಂತಾಗಿ ಬೆಲ್ಲದ ಬೆರಕೆ, ಸಕ್ಕರೆಗಿಂತ ಲೇಸು. ಜಾನಪದ ಸಂಪ್ರದಾಯ ಅದು; ಅರ್ಥವತ್ತಾಗಿದೆ. ಸಂಕ್ರಮಣ ಎಂಬ ಶಬ್ದದ ಆರೋಪವಿರುವುದೇ, ಪ್ರಾಕೃತಿಕವಾಗಿ ಸೂರ್ಯ ದಕ್ಷಿಣದಿಂದ ಉತ್ತರಾಯಣವಾಗುವ ಒಂದು ಅಂತರ್ ಮಧ್ಯಸ್ಥಿಕೆ ಅಂದರೆ ವಿರಸದಿಂದ ಸಮರಸಕ್ಕೆ ಸಾಗುವ ಸ್ಥಿತಿಯ ಹದವೇ ಸಂಕ್ರಾಂತಿ. ಎಳ್ಳುಬೆಲ್ಲ ನೀಡುವುದು ಈ ಹಬ್ಬದ ಸಂಕೇತ. ಅದು ಪರ್ವಕಾಲದ ಶುಚಿ ರುಚಿಯ ಸಿರಿ.

ಜೀವನದಲ್ಲಿ ಒದಗುವ ಒಳ್ಳೆಯ ಬದಲಾವಣೆಗೆ 'ಸಂಕ್ರಾಂತಿ' ಎಂಬ ಹೆಸರೂ ಇದೆ. ಇದು ಗೊತ್ತು ಗುರಿ ಇಲ್ಲದ ಬದಲಾವಣೆ ಅಲ್ಲ, ಎಂಬುದು ಮೇಲಿನ ವಿವರಣೆಯಿಂದ ವಿದಿತವಿದೆ. ಸೂರ್ಯನ ದಿಸೆ ಬದಲಿಸುವ ಸಂದರ್ಭಕ್ಕೆ ಹೊಂದಿಸಿ ಹೇಳಲಾಗುವ ಪರಿ ಇದು. ಧನುರ್ಮಾಸದ ಚಳಿಯ ಸುಗ್ಗಿ, ಸಂಕ್ರಾಂತಿಯ ಹುಗ್ಗಿ ತಿಂದಾಗ, ಎಳ್ಳು ಬೆಲ್ಲ ಸವಿದಾಗ ಮಾಗಿಬಿಡುತ್ತದೆ.

ಸಂಕ್ರಾಂತಿ ಹಬ್ಬ ಪುಷ್ಯ ಮಾಸದಲ್ಲಿ ಅಂದರೆ ಸಾಮಾನ್ಯವಾಗಿ ಜನವರಿ ೧೪ ಅಥವಾ ೧೫ನೇ ತಾರೀಖಿನಂದು ಕರ್ನಾಟಕದಲ್ಲಿ ಆಚರಣೆಗೊಳ್ಳುತ್ತದೆ. ಧನುರ್ಮಾಸದ ಕೊನೆಯದಿನ, ಮಕರ ಸಂಕ್ರಮಣದ ಮೊದಲನೆ ದಿನ 'ಭೋಗಿ'ಯಿಂದ ಈ ಹಬ್ಬ ಆರಂಭವಾಗುತ್ತದೆ. ಅಂದು ದೇವರಿಗೆ ಹುಗ್ಗಿ, ಸಜ್ಜೆರೊಟ್ಟಿ, ಬೆಣ್ಣೆ ವಡೆ ಪಾಯಸ ನಿವೇದಿಸಲಾಗುತ್ತದೆ. ಸುಮಂಗಲಿಯರು ಮೊರದ ಬಾಗಿಣ ಕೊಡುತ್ತಾರೆ. ಮರುದಿನ ಸೂರ್ಯ ಮಕರರಾಶಿಗೆ ಪ್ರವೇಶಿಸುವ ಕಾಲವೇ ಸಂಕ್ರಮಣದ ಪರ್ವಕಾಲ. ಮನೆಯವರೆಲ್ಲ ಎಳ್ಳೆಣ್ಣೆಯನ್ನು ಮೈಗೆ ಹಚ್ಚಿಕೊಂಡು ಅಭ್ಯಂಜನಗೈಯುವರು. ಇಂದಿನ ಹಬ್ಬದೂಟದಲ್ಲಿ ಎಳ್ಳು–ಬೆಲ್ಲದ ತಿಂಡಿ ತಿನಿಸುಗಳಿಗೆ ಪ್ರಾಧಾನ್ಯವಿದೆ. ಗೆಣಸು, ಸಿಪ್ಪೆ ಸಹಿತ ಬೇಯಿಸಿದ ಉಪ್ಪು ಹಚ್ಚಿದ ಹಸಿ ಅವರೆಕಾಯಿ ಹಾಗೂ ತರಕಾರಿ ಅವರೆಕೂಟು, ಸಿಹಿ ಹಾಗೂ ಖಾರದ ಹುಗ್ಗಿ ಇತ್ಯಾದಿಗಳ ಬಳಕೆ ಉಂಟು. ಕನ್ನಡನಾಡಿನ ರಾಮಾನುಜೀಯ ಸಂಪ್ರದಾಯದವರಿಗೂ ಇಂದು ವಿಶೇಷ ತಿಂಡಿ–ತಿನಿಸುಗಳ ಹಬ್ಬ ವಾಗಿದೆ.









ಸಂಕ್ರಮಣದ ಮರು ದಿನ ಎಳೆಯ ಮಕ್ಕಳಿಗೆ ಕರಿ ಎರೆಯುವ ಸಂಪ್ರದಾಯ ವಿದೆ. ಮಕ್ಕಳನ್ನು ಹಸೆಯ ಮೇಲೆ ಕೂರಿಸಿ ಕಬ್ಬು, ಕಡಲೆ ಕಾಯಿ, ಸವಿದಿನಿಸು, ಗಜ್ಜರಿಹೋಳು ಇತ್ಯಾದಿಗಳನ್ನು ತಲೆಯ ಮೇಲೆ ಎರೆದು ಆರತಿಮಾಡಿ ಸೇಸೆ ಇಕ್ಕಿ, ಮುತ್ತೈದೆಯರಿಗೆ ಅರಿಶಿನ ಕುಂಕುಮ, ಎಳ್ಳು ಚಿಗಳೆ ಕೊಡುವರು. ಉತ್ತರ ಕರ್ನಾಟಕದಲ್ಲಿ ಇದು ರೂಢಿ. ದಕ್ಷಿಣ ಕರ್ನಾಟಕದಲ್ಲಿ ಸಂಕ್ರಾಂತಿ ದಿನದಂದೇ ಬೆಳಗ್ಗೆ ಹಸುವನ್ನು ಕರತಂದು ಮಾಡಿದ ಹಬ್ಬದಡಿಗೆ, ಎಳ್ಳು–ಬೆಲ್ಲವನ್ನು ಸೂರ್ಯನಿಗೆ ತೋರಿ, ಹಸುವನ್ನು ಪೂಜಿಸಿ ನಿವೇದಿಸುವರು. ಮಕ್ಕಳನ್ನು ಹಸೆಮಣೆ ಮೇಲೆ ಕೂರಿಸಿ ಎಲಚಿ, ಎಳ್ಳು, ಬೆಲ್ಲದಕುಡಿಕೆ, ಕಬ್ಬು, ಕಾಸು ಇವುಗಳನ್ನು ತಲೆ ಮೇಲಿನಿಂದ ಎರೆದು ಇಳಿತೆಗೆದು, ಕೆಂಪಾರತಿ ಮಾಡುವರು. ಎಳ್ಳು ಬೀರುವರು. ಈ ಎಳ್ಳಿನಲ್ಲಿ, ಕಡಲೆಕಾಯಿ ಬೀಜ, ಬೆಲ್ಲ, ಕಲ್ಯಾಣಶೇವೆ, ಕೊಬ್ಬರಿ, ಸಕ್ಕರೆ ಅಚ್ಚು ಹಾಗೂ ಸಕ್ಕರೆ ಬೊಂಬೆ, ಕಬ್ಬು, ಇದ್ದು, ಅದನ್ನೆಲ್ಲ ಎಳ್ಳುಬೀರಲು ಹೋಗಿ ಬಂಧುಗಳು, ನೆರೆಹೊರೆಯವರಿಗೆಲ್ಲ ಸಮರಸ ಬಾಂಧವ್ಯದ ಸಂಕೇತವಾಗಿ ನೀಡುವರು. ಅದು ಸ್ನೇಹ, ಪ್ರೀತಿ ವರ್ಧನೆಯ ಸಂಕೇತ.

ಗ್ರಾಮೀಣ ಪ್ರದೇಶಗಳಲ್ಲಿ ಸಂಕ್ರಾಂತಮ್ಮ ದೇವತೆ ಎಂದು ಮಣ್ಣಿನಲ್ಲಿ ಒಂದು ದೊಡ್ಡ, ಒಂದು ಸಣ್ಣ ಗೋಪುರಾಕೃತಿಗಳನ್ನು ರೂಪಿಸಿ, ದೀಪದ ಗೂಡು ಮಾಡಿ, ತುದಿಗೆ ಕಟ್ಟೆಹೂವು ಮುಡಿಸಿ ಪೂಜಿಸುವರು. ದನಕರುಗಳಿಗೆ ಸ್ನಾನಮಾಡಿಸಿ ಸಿಂಗರಿಸಿ ಕೊಂಬಿಗೆ ಬಣ್ಣ ಹಚ್ಚಿ ಗಂಟೆ ಗೆಜ್ಜೆ ಗಗ್ಗರ ಹಾಕಿ, ದೇಗುಲದ ಬಳಿ ಕರೆದುಕೊಂಡು ಹೋಗಿ, ದೇವರ ತಳಿಗೆ ಮಾಡಿ, ಪ್ರದಕ್ಷಿಣೆ ಸಹಿತವಾಗಿ ಬರುವರು. ಸಂಜೆ ರಾಸುಗಳನ್ನು ಹಾಗೆ ಹೊಡೆದುಕೊಂಡು ಬರುವಲ್ಲಿ ಊರಿನಾಚೆ ಅಗಲವಾಗಿ ಒಣಗಿದ ತರಗನ್ನು ಮೂರು ಕಡೆ ಹರಡಿ ಬೆಂಕಿ ಹಚ್ಚಿ ಉರಿಸಿ ಕೇಕೆ ಹಾಕಿ ರಾಸುಗಳನ್ನು ಸಂಕ್ರಾಂತಮ್ಮನ ಮುಂದೆ ಹಾಯಿಸುವರು. ಇದನ್ನು ಕಿಚ್ಚು ಹಾಯಿಸುವುದು ಎನ್ನುತ್ತಾರೆ. ಆ ನಂತರ ಮನೆಗೆ ಹೊಡೆದುಕೊಂಡು ಹೋದ ರಾಸುಗಳನ್ನು ಬಾಗಿಲಿಗೆ ಅಡ್ಡವಾಗಿಟ್ಟ ಒನಕೆಯ ಮೇಲೆ ಹಾಯಿಸುತ್ತಾರೆ. ಒನಕೆ, ಜ್ಯೋತಿಸ್ತಂಭ, ಶಿವನ, ಸೂರ್ಯನ ಸಂಕೇತ. ಒನಕೆ ಅದರ ಪ್ರತೀಕ: ರಾಸುಗಳಿಗೆ ತಗುಲಿದ ದೃಷ್ಟಿ ಶಾಂತಿ ಆಗಲೆಂದು ಈ ಆಚರಣೆ ನಡೆಯುವುದೆನ್ನಲಾಗಿದೆ. ಅಲ್ಲದೆ 'ಶಕ್ತಿ' ಸಂಕೇತ ಸಂಕ್ರಾಂತಮ್ಮ. 'ಪುರುಷ' ಸಂಕೇತ ಶಿವ–ಸೂರ್ಯರಲ್ಲಿ ಪ್ರಕೃತಿ–ಪುರುಷರ ಸಹಗಾಮಿತನದ ಕಪಿಲಮುನಿ ಪ್ರಣೀತ ಸಾಂಖ್ಯತತ್ವಕ್ಕೆ ಮೂಲಜನ ಪದರೂಪ ಈ ಆಚರಣೆಯಲ್ಲಿರಬಹುದು.

ಇನ್ನು ಶಾಸನಗಳ ಹಿನ್ನೆಲೆಯಲ್ಲಿಯು ಸಂಕ್ರಾಂತಿ ಹಬ್ಬವನ್ನು ಗಮನಿಸಬಹುದು. ಕ್ರಿ.ಶ. ೧೨೨೬ರ ಹೊಯ್ಸಳರ ಕಾಲದಲ್ಲಿ ದೊರೆಗೆ ಪುಣ್ಯವಾಗಬೇಕೆಂದು ಸಂಕ್ರಾಂತಿ ಪುಣ್ಯಕಾಲದಲ್ಲಿ ದಾನ ನೀಡಲಾಗಿದೆ. ಕ್ರಿ.ಶ. ೧೪೦೬ರ ವಿಜಯನಗರ ಇಮ್ಮಡಿ ಹರಿಹರನ ಕಾಲದ ಶಾಸನದಲ್ಲಿ ಮಕರ ಸಂಕ್ರಮಣ ಪುಣ್ಯಕಾಲದಲ್ಲಿ ದಾನ ನೀಡಿದ ಸಂಗತಿ ಇದೆ. ಕ್ರಿ.ಶ. ೧೭೧೫ರ ದೊಡ್ಡಬಳ್ಳಾಪುರ ಶಾಸನದ ರೀತ್ಯಾ ಆವತಿನಾಡ ಪ್ರಭು ದೊಡ್ಡಬೈರೇಗೌಡರು ಮಕರಸಂಕ್ರಾಂತಿ ಮಹಾಪುಣ್ಯಕಾಲದಲ್ಲಿ ಏಕಭೋಗ್ಯವಾಗಿ ಗ್ರಾಮದಾನ ನೀಡಿದ ಸಂಗತಿ ಇದೆ. ಕ್ರಿ.ಶ. ೧೧೬೨ರ ಕೋಡಿ ಮಠ ಶಾಸನದಲ್ಲಿ ಕೊಟ್ಟ ದಾನವನ್ನು ರಕ್ಷಿಸಿದ ಯಾರಿಗೇ ಆಗಲಿ ವಾರಣಾಸಿ ಕುರುಕ್ಷೇತ್ರ ಪ್ರದೇಶದಲ್ಲಿ ಸಾಸಿರ ಕವಿಲೆಯಂ ಕೋಡುಂ ಕೊಳಗುಮಂ ಪೊನ್ನುಂ ರಂನ್ನದಿಂ ಕವಿಲೆಯಂ ಕೋಡುಂ ಕೊಲಗುಮಂ ರಂನ್ನದಿಂ ಕಟ್ಟಿಸಿ ಚತುರ್ವೇದ ಪಾರಂಗತರಿಗೆ ದಾನ ಕೊಟ್ಟ ಫಲ ಒದಗುತ್ತದೆ ಎಂಬ ಫಲಶ್ರುತಿಯನ್ನು ಹೇಳಲಾಗಿದೆ. ಅಂದರೆ ಸಂಕ್ರಾಂತಿ ಸಂದರ್ಭದ ಗೋವುಗಳ ಅಲಂಕಾರ ಪೂಜಾ ಸಂಕೇತವನ್ನು ಸೂಚಿಸುವ ದಾನವನ್ನು ಹೇಳುವಂತೆ ಈ ಹೋಲಿಕೆ ಯನ್ನು ಶಾಸನ ನೀಡಿದೆ. ಸಂಕ್ರಾಂತಿ ಹಾಗೂ ರಥಸಪ್ತಮಿ ಸೂರ್ಯೋಪಾಸಕರಿಗೆ ದೊಡ್ಡ ಹಬ್ಬ.

ಕೊಡಗಿನಲ್ಲಿ ಮಕರಸಂಕ್ರಾಂತಿ ಹಾಗೂ ಮರುದಿನ ನಡೆಯುವ ಕುಮಾರಲಿಂಗೇಶ್ವರನ ಗೊದ್ದುಜಾತ್ರೆ, ಅವರ ದಾಳುವಿನ ಹುಲುಕೋಡಯ್ಯನ ಜಾತ್ರೆ ಬಹಳ ಪ್ರಸಿದ್ಧ. ಇಲ್ಲಿ ಹೆಗ್ಗಡ ಹಳ್ಳಿಯ ವೀರಶೈವ ಮಠಾಧಿಪತಿಗಳು ದಲಿತವರ್ಗದ ಕೊಟವಳಿ–ಕಣಿಯರೊಡನೆ ಸಾಗಿ ಸಂಕ್ರಮಣ ಜಾತ್ರೆ ನಡೆಸುವುದೊಂದು ವಿಶೇಷ.

ಮಹಾರಾಷ್ಟ್ರದಲ್ಲಿ ಕನ್ಯೆಯರು ಸಂಕ್ರಾಂತಿಯ ದಿವಸ ಅಖಂಡ ಸೌಭಾಗ್ಯ ಪ್ರಾಪ್ತಿಗಾಗಿ ಎಳ್ಳಿನ ವ್ರತ ಮಾಡುತ್ತಾರೆ. ಹೆರಿಗೆಯ ನಂತರ ನಿರ್ದಿಷ್ಟದಿನದಲ್ಲಿ ಸೂರ್ಯದರ್ಶನ, ಕಡಗೋಲಿಗೆ ಸೂರ್ಯದರ್ಶನ ಮಾಡಿಸಿ, ಅಕ್ಕಿಕಾಳು ಹಾಕುವಿಕೆ ಅಲ್ಲಿದೆ. ಕಡೆಗೋಲು, ಒನಿಕೆ, ಕಂಬಗಳ ಪೂಜೆ ಎಂದರೆ ಸೂರ್ಯನ ಪೂಜೆಯೆ. ಶಿವನೂ ಜ್ಯೋತಿಸ್ತಂಭರೂಪನಲ್ಲವೆ! ಶಿವ ಮತ್ತು ಸೂರ್ಯರಲ್ಲಿ ಪ್ರಾಚೀನ ಸಂಬಂಧ ಹೀಗೆ ಏಕಾನ್ವಯವಾಗಿದೆ. ಶಿವಾಲಯಗಳಲ್ಲಿ ಸೂರ್ಯ

ಪರಿವಾರ ದೇವತೆಯಾಗಿರುವುದುಂಟು. ಗರುಡ ಪುರಾಣದಲ್ಲಿ 'ಶಿವಾಯ ಸೂರ್ಯಾಯ ನಮಃ' ಎಂಬ ಶಿವಾರ್ಚನ ಮಂತ್ರವಿದೆ. ಪದ್ಮಪುರಾಣದಲ್ಲಿ ಸೂರ್ಯನನ್ನು ರುದ್ರಪುರುಷ ಎಂದು ಹೇಳಿ ಸೂರ್ಯನಿಗೂ ಶಿವನಿಗೂ ವ್ಯತ್ಯಾಸವಿಲ್ಲ ಎಂದಿದೆ.

ಮಹಾರಾಷ್ಟ್ರದ ಹೆಂಗಳೆಯರು ಈ ಹಬ್ಬದಲ್ಲಿ ಮಣ್ಣಿನ 'ಸಘಟ' (ಗಡಿಗೆ) ಪೂಜೆ ಮಾಡುತ್ತಾರೆ. ಹೊಸ ಗಡಿಗೆಗಳನ್ನು ಸುಣ್ಣ ಬಣ್ಣಗಳಿಂದ ಅಲಂಕರಿಸಿ ಅವುಗಳಲ್ಲಿ ಕಡಲೆಕಾಳು, ಮೊಳಕೆ ಮೂಡಿದ ಗೋಧಿ, ಕಬ್ಬಿನ ತುಂಡು, ಗಜ್ಜರಿ ಇತ್ಯಾದಿಗಳನ್ನು ಹಾಕಿ ಹೋಳಿಗೆ ನೈವೇದ್ಯವಿಡುತ್ತಾರೆ. ಈ ವ್ರತದ ಸಂದರ್ಭದಲ್ಲಿ ಕರಿ ಬಣ್ಣದ 'ಖಡಿ' ತೆಗೆಸಿದ ಪೈಠಣದ ಸೀರೆ ಕುಪ್ಪಸ ಉಡುತ್ತಾರೆ. ಎಳ್ಳಿನ ಮೇಲೆ ಸಕ್ಕರೆ ಪಾಕ ಹಾಕಿ ತಯಾರಿಸಿದ ಕುಸುರೆಳ್ಳಿನಿಂದ ಹೊಸ ಮದುವಣಗಿತ್ತಿಗೆ ಅಲಂಕರಿಸುತ್ತಾರೆ. ಉತ್ತರ ಕರ್ನಾಟಕದಲ್ಲಿಯೂ ಈ ಬಗೆಯ ರೂಢಿಯೂ ಇದೆ.

ಆಂಧ್ರನಾಡಿನಲ್ಲಿ ಜನವರಿ ೧೩ ರಿಂದ ೧೫ರವರೆಗೆ ಚಾಂದ್ರಮಾನದ ಪುಷ್ಯ ಮಾಸದಲ್ಲಿ ಆಚರಿಸುವ ದೊಡ್ಡ ಹಬ್ಬವೆ ಉತ್ತರಾಯಣ ಸಂಕ್ರಾಂತಿ. ಅಂದು ಸ್ವರ್ಗದ ಬಾಗಿಲುಗಳು ತೆರೆದಿರುತ್ತವೆ ಎಂಬುದು ಹಿಂದೂಗಳ ನಂಬಿಕೆ. ಬೇಸಾಯದ ಘನತೆಯನ್ನು ಎತ್ತಿ ಹಿಡಿಯುತ್ತದೆ ಎಂದು ಇದಕ್ಕೆ ರಾಷ್ಟ್ರೀಯ ಹಬ್ಬದ ಸ್ವರೂಪ ನೀಡಿದ್ದಾರೆ. ಹಬ್ಬದ ಮೊದಲ ದಿನವನ್ನು 'ಭೋಗಿ' ಎಂದು ಕರೆಯುತ್ತಾರೆ. ಬೆಳಗಿನ ಜಾವದಲ್ಲಿ ಅಭ್ಯಂಜನ ಸ್ನಾನ ಮಾಡಿ 'ಭೋಗಿ ಮಂಟ' – ಒಣಹುಲ್ಲಿನ ಬೆಂಕಿ ಹತ್ತಿಸಿ ಸುತ್ತ ಕುಳಿತು ಹರಟುತ್ತ, ಸುಗ್ಗಿ ದೇವರನ್ನು ಹೊಗಳಿ ಹಾಡಿ ಕುಣಿಯುತ್ತಾರೆ. ಒಂದು ರೀತಿ ಚಳಿಕಾಯಿಸುವ ಆಚರಣೆ ಇಲ್ಲಿದೆ. ಸಂಜೆ ಕಬ್ಬಿನಚೂರು, ಎಲಚಿಹಣ್ಣು, ನಾಣ್ಯ ಗೋಲಿಗಾತ್ರದ ತಿಂಡಿಯಾದ ಪಾಲಕಾಯಲು' ಎಲ್ಲ ಸೇರಿಸಿ ಮಕ್ಕಳ ತಲೆಯ ಮೇಲೆ ಎರೆದು 'ಬುಡಬುಡಪಂಡ್ಲು' ಎನ್ನುತ್ತಾರೆ. ಹಬ್ಬದ ಎರಡನೆ ದಿನವೆ ಸಂಕ್ರಾಂತಿ ಬೀದಿ ಉತ್ಸವ ಬಸವಣ್ಣನಿಗೆ ನಡೆಯುತ್ತದೆ. ರೈತರು ತಮ್ಮ ಗ್ರಾಮದವರಿಗೆ ಔತಣವೇರ್ಪಡಿಸುತ್ತಾರೆ. ಹಬ್ಬದ ಮೂರನೆ ದಿನದಂದು ವಿವಿಧ ಸ್ಪರ್ಧೆ, ಕುಡಿತ, ಔತಣವಿದ್ದು 'ಕನುಮು'ದಿನ ವೆನ್ನುತ್ತಾರೆ. ಕೆಲವೆಡೆ ನಾಲ್ಕನೇ ದಿನವೂ ಹಬ್ಬ ಆಚರಿಸುವಲ್ಲಿ ಗೋಪೂಜೆ, ಮೆರವಣಿಗೆ ಮಾಡಿ ಮುಕ್ಕುನುಮು ದಿನ ಎನ್ನುತ್ತಾರೆ. ಗಾಳಿಪಟ ಹಾರಿಸುವುದೂ ಉಂಟು. ಇಲ್ಲಿ ಸಂಕ್ರಾಂತಿಯನ್ನು ಎಳ್ಳಿನ ವೈವಿಧ್ಯಮಯ ಬಳಕೆಯ ಕಾರಣ ತಿಲಸಂಕ್ರಾಂತಿ ಎಂದೂ ಕರೆದು, ಸಂಕ್ರಾಂತಿಯ ಜಾನಪದ ಚಹರೆಯನ್ನು ದಟ್ಟಗೊಳಿಸಿದ್ದಾರೆ.

ತಮಿಳುನಾಡಿನಲ್ಲಿ ಮಕರಸಂಕ್ರಾಂತಿಯು 'ಪೊಂಗಲ್'ಎಂಬ ಹೆಸರಿನಲ್ಲಿ ಸಾರ್ವತ್ರಿಕ ದೊಡ್ಡ ಹಬ್ಬವಾಗಿದೆ. ಪೊಂಗಲ್ ಇಲ್ಲಿ ಮೂರುದಿನ ಹಬ್ಬ. ಹೊಸದಾಗಿ ಒಕ್ಕ ಅಕ್ಕಿಯನ್ನು ಬೇಯಿಸಿ ಸೇವಿಸುವುದು; ಮರುದಿನ ದನ ಕರುಗಳಿಗೆ ಪೂಜಿಸಿ ಹಬ್ಬದಡಿಗೆ ತಿನಿಸುವುದು ಸೂರ್ಯ ದೇವರಿಗೆ ಅಲಂಕೃತ ಹೊಸ ಮಡಿಕೆಯಲ್ಲಿ ಸಿದ್ಧ ಮಾಡಿದ ಪೊಂಗಲನ್ನು ಅರ್ಪಿಸುವುದು ಅಂದರೆ ಪೊಂಗಲನ್ನು ಮೂರು ಎಲೆಗಳ ಮೇಲಿಟ್ಟು, ಕರ್ಪೂರ ಹಚ್ಚಿ ನಿವೇದಿಸಿ ಮುಂದಿನ ಪೊಂಗಲ್ ಹಬ್ಬದವರೆಗೆ ಅದೃಷ್ಟ ನೀಡು ಎಂದು ಮೊರೆ ಇಡುವುದಾಗಿದೆ. ಪೊಂಗಲಿನ ಮರುದಿವಸದ ಅಚರಣೆಗಳನ್ನು 'ಮಾಟ್ಟುಪೊಂಗಲ್' ಎಂದು ಹಸುಹೋರಿಗಳನ್ನು ಅಲಂಕರಿಸಿ ಅವಕ್ಕೆ ಪೊಂಗಲನ್ನು ಅರ್ಪಿಸುವರು. ತಮಿಳಿನ 'ತ್ರೈ' ಮಾಸದ ಮೊದಲ ದಿನ ಬರುವ ಹಬ್ಬವಿದಾಗಿ ತಮಿಳಿನಾಡಿನ ಹಣ ಹಾಗೂ ಕಣಜ ತುಂಬಿದ ಕಾಲದ ಹಬ್ಬವೆನಿಸಿ ವೈಶಿಷ್ಟ್ಯ ಪಡೆದಿದೆ. ಸೂರ್ಯ ಪೂಜೆಯ ಮುಖ್ಯದಿನವೆನಿಸಿದೆ. ಪೊಂಗಲ್ ದಿನದ ಸೂರ್ಯೋದಯ ಸಮಯದಲ್ಲಿ ಮನೆಯ ತೆರೆದ ಒಳಾಂಗಣ ಇಲ್ಲವೆ ಬೀದಿ ಬಾಗಿಲ ಮೆಟ್ಟಿಲ ಬಳಿ ಪೊಂಗಲನ್ನು ಸಿದ್ಧಮಾಡಿ ನಿವೇದಿಸುವರು.



ಹಬ್ಬ ಮೂಲತಃ ವ್ಯಕ್ತಿ ಹಾಗೂ ಸಮುದಾಯಕ್ಕೆ ಸಂತೋಷ, ಉಲ್ಲಾಸ ಕೊಡುವ ಸಂದರ್ಭವಾಗಿದೆ. ಅರಳಿದ ಮನಸ್ಸು ಉಲ್ಲಾಸಗೊಂಡು, ನಾಲಗೆ ರುಚಿಗೊಂಡು ಬೌದ್ಧಿಕ ಸಂತೋಷವನ್ನೂ ತರುವ ಮಾನವ ಪ್ರಯತ್ನವಾಗಿದೆ. ಬೆಳಕಿನ ಮೊತ್ತವಾದ ಸೂರ್ಯ, ಬೇಸಾಯದ ಅಧ್ವರ್ಯುಗಳಾದ ರುದ್ರ–ಶಿವರತೇಜೋಭೂಮಿಕೆಯಾಗಿ ಗೋವಿನ ಪರೋಪಕಾರದ ಸಂಕೇತಗಳನ್ನು ಸೂಚಿಸುವ ಹಬ್ಬವಾಗಿದೆ, ಕ್ರಾಂತಿದರ್ಶಿಯಾಗಿದೆ ಸಂಕ್ರಾಂತಿ. ಇದು ನಮ್ಮ ಸಂಸ್ಕೃತಿ ಕಂಡುಕೊಂಡ ಬದುಕಿನ ಹಬ್ಬ. ವೈರುಧ್ಯಗಳೇನೇ ಇರಲಿ, ವಿರಸ ವಿದೂರವಾದ ಸಮರಸವೇ ಬಾಳು ಎಂಬ ಸಂದೇಶ ನೀಡಿರುವ ಹಬ್ಬವಿದು. ನಮ್ಮ ರಾಷ್ಟ್ರೀಯತೆಯ ಪ್ರಾಚೀನ ವಿಕಸನ ಸಂಕೇತ.

*





# ಎಳ್ಳು–ಬೆಲ್ಲ ಸವಿಯುವ ಸಮೃದ್ಧಿಯ ಸಂಕೇತ ಸಂಕ್ರಾಂತಿ

– ಯು.ಎನ್. ಸಂಗನಾಳಮಠ
ರಾಜ್ಯಶಾಸ್ತ್ರ ಉಪನ್ಯಾಸಕರು,
ಸರ್ಕಾರಿ ಪದವಿಪೂರ್ವ ಕಾಲೇಜು, ಹೊನ್ನಾಳಿ,
ದಾವಣಗೆರೆ ಜಿಲ್ಲೆ.



"ಬಂದಿತು ಸಂಕ್ರಾಂತಿ । ತಂದಿತು ಸುಖಶಾಂತಿ" ಎನ್ನುವ ಕವಿವಾಣಿಯಂತೆ ಜನರಲ್ಲಿ ಉತ್ಸಾಹ, ಉಲ್ಲಾಸ, ಚೈತನ್ಯವೂ ಸಂತೋಷ ಎಲ್ಲವನ್ನೂ ಉಂಟುಮಾಡುತ್ತವೆ. ಮಕರ ಸಂಕ್ರಾಂತಿ ಅಥವಾ ಸಂಕ್ರಮಣ, ವಿಶ್ವಾತ್ಮ, ಜಗದಕಣ್ಣು ಸೂರ್ಯನ ಪದ ಬದಲಾವಣೆಗೆ ಸಂಬಂಧಿಸಿದ ಹಬ್ಬ. ದಕ್ಷಿಣಾಯನದಿಂದ ಉತ್ತರಾಯಣಕ್ಕೆ ಚಲಿಸುವ ದಿನವೇ ಮಕರ ಸಂಕ್ರಾಂತಿ. ಇದನ್ನು ಉತ್ತರಾಯಣದ ಪುಣ್ಯಕಾಲ ಎನ್ನುತ್ತಾರೆ. ಸಾಮಾನ್ಯವಾಗಿ ಜನವರಿ ೧೪ ಅಥವಾ ೧೫ನೇ ತಾರೀಖಿನಂದು ಸಂಕ್ರಮಣ. ಸಂಕ್ರಾಂತಿ ಎಂದರೆ ಉಜ್ವಲ ಪ್ರಕಾಶ. ಈ ಸಂದರ್ಭದಲ್ಲಿ ಋತುವಿನಲ್ಲಿ ಪ್ರಮುಖ ಬದಲಾವಣೆಗಳು ಆಗುತ್ತವೆ.

ಭಾರತದಲ್ಲಿ ಸೂರ್ಯನು ಪ್ರತ್ಯಕ್ಷ ದೇವರು ಚರಾಚರ ವಸ್ತುಗಳ ಆತ್ಮ. ಸೂರ್ಯನಿಂದಲೇ ಸಕಲ ಜೀವಗಳ ಬದುಕು, ಪಾಲನೆ ಪೋಷಣೆ ಆಗುವುದಲ್ಲದೇ ಅಂತಿಮವಾಗಿ ಆತನಲ್ಲಿಯೇ ಲೀನವಾಗುತ್ತವೆ. ಋಗ್ವೇದದಲ್ಲಿ ಸೂರ್ಯನನ್ನು ನಭದ ಸ್ವರ್ಗಾಭರಣ ಎಂದು ಹೇಳಿದೆ. ಸೂರ್ಯೋಪಾಸನೆಗೆ ಹೆಚ್ಚಿನ ಪ್ರಾಶಸ್ತ್ಯವಿದೆ. ರೋಗ ನಿವಾರಣೆಗೆ ಅಭಿಷ್ಟಗಳ ಸಿದ್ಧಿಗೆ, ಶಕ್ತಿ ಪ್ರಾಪ್ತಿಗೆ ಆರೋಗ್ಯ ಸುಧಾರಣೆಗೆ ಸೂರ್ಯ ನಮಸ್ಕಾರಗಳನ್ನು ಮಾಡುತ್ತಾರೆ. ವೈಜ್ಞಾನಿಕ ಸಂಶೋಧನೆಯಿಂದ ಸೌರಶಕ್ತಿಯನ್ನು ಬಳಸಿ ಗೃಹೋಪಯೋಗಿ ಮತ್ತು ಸಾರ್ವತ್ರಿಕ ವಿದ್ಯುತ್ತನ್ನು ಪಡೆಯುತ್ತಿದ್ದಾರೆ. ಮಳೆ–ಬೆಳೆ, ಕತ್ತಲು–ಬೆಳಕು, ರೋಗ–ರುಜಿನ ಪ್ರಕೃತಿಯ ಚೆಲ್ಲಾಟಗಳಿಗೆ ಸೂರ್ಯನೇ ಕಾರಣ.

ಸೂರ್ಯನು ಮಕರರಾಶಿಗೆ ಪ್ರವೇಶಿಸಿ ದಕ್ಷಿಣದಿಂದ ಉತ್ತರಾಭಿಮುಖವಾಗಿ ಆರು ತಿಂಗಳ ಪ್ರಯಾಣ ಬೆಳೆಸುವ ದಿನ ಮಕರಸಂಕ್ರಾತಿ. ಇದು ಉತ್ತರಾಯಣದ ಪುಣ್ಯಕಾಲ. ಶರಶಯ್ಯೆಯಲ್ಲಿ ಮಲಗಿದ ಭೀಷ್ಮರು ಪ್ರಾಣ ತ್ಯಜಿಸಲು ಉತ್ತರಾಯಣದ ಪುಣ್ಯಕಾಲವನ್ನು ಕಾಯುತ್ತಿದ್ದರೆಂದು ಮಹಾಭಾರತದಲ್ಲಿ ಹೇಳಲಾಗಿದೆ. ಒಂದು ರಾಶಿಯಿಂದ ಇನ್ನೊಂದು ರಾಶಿಗೆ ಸೂರ್ಯನ ಪಥ ಸಾಗುತ್ತಲಿರುತ್ತದೆ. ಹಾಗೆ ಹನ್ನೆರಡು ರಾಶಿಗಳಿರುವುದರಿಂದ ಹನ್ನೆರಡು ಸಂಕ್ರಮಣಗಳುಂಟು. ಅದರಲ್ಲಿ ಜನವರಿ ೧೪ರ ಮಕರ ಸಂಕ್ರಮಣ ಜುಲೈ ೧೬ರ ಕರ್ಕಾಟಕ ಸಂಕ್ರಮಣ ಮುಖ್ಯ. ಸಂಕ್ರಾಂತಿಯ ನಂತರ ಉತ್ತರಾಯಣದಲ್ಲಿ ರಾತ್ರಿ ಕಡಿಮೆ ಆಗಿ ಹಗಲು ಹೆಚ್ಚಾಗುತ್ತದೆ. ಹಾಗೆ ನಮ್ಮ ಜೀವನದಲ್ಲಿ ಸುಖವೂ ಹೆಚ್ಚಾಗುವುದು. ಪುರಾಣದ ಪ್ರಕಾರ ಈ ದಿನದಿಂದ ದೇವತೆಗಳಿಗೆ ಹಗಲು ರಾಕ್ಷಸರಿಗೆ ರಾತ್ರಿ ಆರಂಭ ಎಂದು ತಿಳಿದು ಬರುತ್ತಿದೆ.

ಡಿಸೆಂಬರ್–ಜನವರಿ ತಿಂಗಳ ಹೇಮಂತ ಶಿಶಿರ ಋತುಗಳ ಚಳಿಗಾಲ. ಚಳಿಗಾಳಿಯ ಕೊರೆತದಿಂದ ಬರಡಾದ ಜೀವಕ್ಕೆ, ಕೊರಡಾದ ಗಿಡಬಳ್ಳಿಗಳಿಗೆ ನವಚೇತನ ತುಂಬುತ್ತದೆ. ಉತ್ತರಾಯಣದ ಹಿತಕರವಾದ ವಾತಾವರಣ ಪ್ರಕೃತಿಯ ವಿಕಾಸ–ವಿಲಾಸ, ಸುಗ್ಗಿಯ ಹಿಗ್ಗು ಆರೋಗ್ಯದ ಭಾಗ್ಯ ದವಸ–ಧಾನ್ಯಗಳ ತುಂಬಿಕೆಯಿಂದ ಈ ಕಾಲ ಸಮೃದ್ಧಿ ಹೊಂದಿರುವ ಕಾಲ.

ಗ್ರಾಮೀಣ ಪ್ರದೇಶದ ಜನರಿಗೆ ಸಂಕ್ರಾಂತಿ ಸಡಗರದ ಹಬ್ಬ. ಹೊಲದಲ್ಲಿ ಬೆಳೆಗಳ ಕಟಾವು ಮುಗಿದು ಮನೆಯ ಕಣಜ ಧಾನ್ಯ ಲಕ್ಷ್ಮಿಯಿಂದ ತುಂಬಿರುತ್ತದೆ. ಮೈಮನಸ್ಸು ಸುಖ ಶಾಂತಿ ನೆಮ್ಮದಿಯಿಂದ ತುಂಬಿರುತ್ತದೆ. ಹೊಲದ ದುಡಿಮೆಯಲ್ಲಿ ಸಂಗಾತಿಯಾಗಿ ದುಡಿದ ಎತ್ತುಗಳಿಗೆ ಸ್ನಾನಮಾಡಿಸಿ ಹೂ–ಬಣ್ಣಗಳಿಂದ ಅಲಂಕಾರ ಮಾಡಿ ಮೆರವಣಿಗೆ ಮಾಡಿ, ಅಕ್ಕಿ ಬೆಲ್ಲದ ಹುಗ್ಗಿ ಮಾಡಿ ಆರಾಧ್ಯ ದೈವಕ್ಕೆ ಎಡೆಮಾಡುವನು. ರೈತರು ಇದನ್ನು ಸುಗ್ಗಿ ಹಬ್ಬ ಎಂದು ಕರೆಯುತ್ತಾರೆ. ಉತ್ತರ ಕರ್ನಾಟಕದಲ್ಲಿ "ಕರಿ ಹಾಯುವುದು" ಎನ್ನುತ್ತಾರೆ.



ಈ ಸಮಯದಲ್ಲಿ ಸಾಧಾರಣವಾಗಿ ಬರುವ ನೆಗಡಿ, ಕೆಮ್ಮು, ಅಸ್ತಮಾ, ಜ್ವರ ಇವುಗಳನ್ನು ಉಪಶಮಯ ಮಾಡಲು ಒಂದೆರಡು ಕಾಳು ಮೆಣಸು, ಅರಿಶಿನಪುಡಿ, ಬೆಲ್ಲವನ್ನು ಮೂರು ಲೋಟ ನೀರಿಗೆ ಕುದಿಸಿ, ಅದನ್ನು ಅರ್ಧಲೋಟಕ್ಕೆ ಇಳಿಸಿ ಅರ್ಧಲೋಟ ಹಾಲನ್ನು ಬೆರಸಿ ಕುಡಿಯಬೇಕು ಎಂದು ಆಯುರ್ವೇದ ಪದ್ಧತಿ ಹೇಳುತ್ತದೆ.

ಸಂಕ್ರಾಂತಿ ದಿನದಂದು ಎಳ್ಳು ಬೀರುವುದು ಸಂಪ್ರದಾಯ. 'ಎಳ್ಳು ಬೆಲ್ಲ ತಿಂದು ಒಳ್ಳೊಳ್ಳೆ ಮಾತನಾಡೋಣ' ಎಂದು ಪರಸ್ಪರ ಅಭಿನಂದಿಸುವುದು ವಾಡಿಕೆ. ಇದು ಸ್ನೇಹ ಸಂವರ್ಧನದ ದ್ಯೋತಕ. ಹಿಂದಿನ ತಪ್ಪುಗಳನ್ನು ತಿದ್ದಿ ಮುಂದೆ ನಡೆದುಕೊಳ್ಳುವುದು ಎಂದರ್ಥ.

ಉತ್ತರ ಕರ್ನಾಟಕದಲ್ಲಿ "ಕುಸುರೆಳ್ಳು" ಎಂದು ಕೊಡುತ್ತಾರೆ. ದಕ್ಷಿಣದ ಭಾಗದಲ್ಲಿ ಎಳ್ಳು-ಬೆಲ್ಲ ಹುರಿಗಡಲೆ-ನೆಲಗಡಲೆ-ಕೊಬ್ಬರಿ ಎಂಬ ಪಂಚದ್ರವ್ಯಗಳ ಮಿಶ್ರಮ ಮಾಡಿ ಕೊಡುತ್ತಾರೆ. ಜೊತೆಗೆ ಸಕ್ಕರೆ ಅಚ್ಚು, ಕಬ್ಬಿನ ತುಂಡನ್ನು ಕೊಡುತ್ತಾರೆ. ಕೆಲವು ಕಡೆ ಬಾಳೆ ಹಣ್ಣನ್ನು ಕೊಡುತ್ತಾರೆ. ಹೊಸಬಟ್ಟೆ ತೊಟ್ಟು ಆಭರಣಗಳನ್ನು ಧರಿಸಿ ಶೃಂಗಾರವಾಗಿ ಹೆಣ್ಣು ಮಕ್ಕಳು ಉತ್ಸಾಹದಿಂದ ನೆರೆಹೊರೆಯವರಿಗೆ, ಬಂಧು ಬಾಂಧವರಿಗೆ ಪಂಚಲು ತೆರಳುವ ವೈಭವದ ಸೊಗಸು ಕಣ್ಣಿಗೆ ಹಬ್ಬ. ಹಿರಿಯರಿಂದ ಆಶೀರ್ವಾದ ಪಡೆಯುತ್ತಾರೆ. ಎಳ್ಳು ಬೆಲ್ಲ ಹಂಚುವುದನ್ನು 'ಎಳ್ಳು ಬೀರುವುದು' ಎಂದು ಕರೆಯುತ್ತಾರೆ.

ಎಳ್ಳು ಕಡಲೆ ಬೀಜದಲ್ಲಿ ಕ್ಯಾಲ್ಸಿಯಂ ಮತ್ತು ಬೆಲ್ಲದಲ್ಲಿ ಕಬ್ಬಿಣಾಂಶವು ಹೇರಳವಾಗಿರುವುದರಿಂದ ನಮಗೆ ಅಗತ್ಯವಾದ ಪೋಷಕಾಂಶಗಳು ಎಳ್ಳು ಬೆಲ್ಲದ ಸೇವನೆಯಿಂದ ದೊರಕುತ್ತವೆ.

ಆಂಧ್ರದಲ್ಲಿ 'ಓಣಂ' ಎಂದೂ ತಮಿಳುನಾಡಿನಲ್ಲಿ 'ಪೊಂಗಲ್' ಎಂದೂ ಕರೆಯುತ್ತಾರೆ. ಪೊಂಗಲ್ ಎಂದರೆ ಹುಗ್ಗಿ ಹೆಸರುಬೇಳೆ, ಬೆಲ್ಲ, ತುಪ್ಪ ಜೀರ್ಣಕಾರಿಯಾಗಿದೆ. ಇವುಗಳಿಂದ ಕೂಡಿದ ಪೊಂಗಲ್ ಪಚನಕಾರಿ. ತಮಿಳುನಾಡಿನಲ್ಲಿ ನೆಲ್ಲಿನಿಂದ ಅಕ್ಕಿಯನ್ನು ತೆಗೆದು ಬೇಯಿಸಿ ಕಬ್ಬಿನ ಜಲ್ಲೆಗಳನ್ನಿರಿಸಿ ಪೂಜೆ ಮಾಡುತ್ತಾರೆ. ಹೊಸ ಅಕ್ಕಿಯ ಪೊಂಗಲ್ ಮಾಡಿ ದೇವರಿಗೆ ನೈವೇದ್ಯ ಮಾಡುತ್ತಾರೆ. ಪೊಂಗಲ್ ಎಂದರೆ ಉಕ್ಕುವುದು ಎಂದು ಇನ್ನೊಂದು ಅರ್ಥ. ಆಂಧ್ರದಲ್ಲಿ ಸಂಕ್ರಾಂತಿ ವಿಶೇಷ ರೀತಿಯಲ್ಲಿ ಶ್ರೀರಾಮನ ಪೂಜೆ ಮಾಡುತ್ತಾರೆ. ಈ ದಿನ ರಾಮ ರಾವಣನನ್ನು ಕೊಂದು ಸೀತೆಯನ್ನು ಮರಳಿ ಪಡೆದ ದಿನ ಎಂದು ಭಾವಿಸುತ್ತಾರೆ.

ಸಂಕ್ರಾಂತಿಗೂ ಎಳ್ಳಿಗೂ ನಿಕಟ ಸಂಬಂಧ ಇದೆ. ಎಳ್ಳು-ಚಿಗಳಿ, ಎಳ್ಳು-ಬೆಲ್ಲ, ಎಳ್ಳು ಬೀಸಿ ಬೆಲ್ಲ ಮಿಶ್ರಣ ಮಾಡಿದ ನೀರು ಇವಕ್ಕೆ ಶೀತ-ವಾತಜನ್ಯವಾದ ರೋಗಗಳನ್ನು ನಿವಾರಿಸುವ ಶಕ್ತಿ ಇದೆ.

ಸಂಕ್ರಾಂತಿಯ ಸ್ವಾರಸ್ಯವನ್ನು ಗ್ರಾಮೀಣ ಪ್ರದೇಶದಲ್ಲಿ ಹೆಚ್ಚು ಕಾಣಬಹುದು. ಮನಸ್ಸಿನ ಕಹಿ ಭಾವನೆ ಮರೆತು ಸಿಹಿ ಭಾವನೆಗಳನ್ನು ತುಂಬಿಸಿಕೊಳ್ಳುವುದರ ಸಂಕೇತವಾಗಿರುವ ಈ ಸಂಕ್ರಾಂತಿ ಹಬ್ಬ ಹೆಚ್ಚು ಆಡಂಬರ, ವೆಚ್ಚವಿಲ್ಲದ ಹಬ್ಬ. ಹಬ್ಬದ ನೆಪದಿಂದ ಆರೋಗ್ಯ ಸುಧಾರಣೆಗೆ ದಾರಿ ಮಾಡುತ್ತದೆ.

*

## ಶ್ರೀವಾಣಿ

ಸುಮಾರು ಎಂಟು ನೂರು ವರ್ಷಗಳ ಹಿಂದೆ ಕರ್ನಾಟಕದಲ್ಲಿ ಜನ್ಮತಾಳಿದ ಬಸವಣ್ಣನವರು ಚಿಕ್ಕವಯಸ್ಸಿನಿಂದಲೂ ಉದಾತ್ತ ಮನೋಭಾವವುಳ್ಳವರಾಗಿ ದಿನಚರಿಯ ಸಾಮಾಜಿಕ ಜೀವನದಲ್ಲಿ ನಡೆಯುತ್ತಿರುವ ಅನ್ಯಾಯಗಳ ವಿರುದ್ಧ ಪ್ರಬಲ ಹೋರಾಟ ನಡೆಸಿದ ಧೀಮಂತ ವ್ಯಕ್ತಿ. ಧರ್ಮದ ಹೆಸರಿನಲ್ಲಿ ಪ್ರಚಲಿತವಾಗಿದ್ದ ಶೋಷಣೆ, ಮೇಲು ಕೀಳುಗಳೆಂಬ ಕಲ್ಪನೆ, ದೀನದಲಿತರ ದಮನ ಮುಂತಾದ ಅನ್ಯಾಯಗಳನ್ನು ಹೋಗಲಾಡಿಸಲು ತಮ್ಮ ಜೀವನವನ್ನೇ ಮುಡಿಪಾಗಿಟ್ಟರು. ಶ್ರೇಷ್ಠವಾದ ಮಾನವೀಯ ಮೌಲ್ಯಗಳನ್ನು ಎತ್ತಿಹಿಡಿದು ಅವುಗಳನ್ನು ಅಳವಡಿಸಿ ಕೊಂಡು ಎಲ್ಲ ವ್ಯಕ್ತಿಯೂ ಉದ್ಧಾರವಾಗುವುದು ಸಾಧ್ಯವೆನ್ನುವ ಆತ್ಮವಿಶ್ವಾಸವನ್ನು ಮೂಡಿಸಿ ಸಕಲರನ್ನು ಉದ್ಧಾರ ಮಾಡಿದ ಮಹಾತ್ಮ. ಒಟ್ಟಿನಲ್ಲಿ ಶ್ರೇಷ್ಠವರ್ಗದ ಮಾನವತಾವಾದಿಯಾಗಿ ಜಗತ್ತಿನ ಮನುಕುಲದ ಸಮಸ್ಯೆಗಳನ್ನು ಪರಿಹರಿಸಲು ಹೆಣಗಾಡಿದ ಮಹಾನುಭಾವರು ಅವರು.







# ಸಂಚಾರಿ ವಿಶ್ವವಿದ್ಯಾಲಯ : ಗ್ರಾಮಾಂತರ ಬಸವ ಜಯಂತಿ

- ಎಚ್.ಎಸ್. ಸಿದ್ಧಗಂಗಪ್ಪ
೫೩/೧, 'ಶಿವಕೃಪ' ೩ನೇ ಅಡ್ಡರಸ್ತೆ,
ಕಾವೇರಿ ಬಡಾವಣೆ, ನಾಗರಬಾವಿ ರಸ್ತೆ, ವಿಜಯನಗರ,
ಬೆಂಗಳೂರು-೪೦.

ಸಮಾಜದ ಒಳಿತಿಗಾಗಿ, ಅಂತರಂಗ ಬಹಿರಂಗ ಶುದ್ಧಿಗಾಗಿ ಬಸವಣ್ಣನವರು ನುಡಿದು ನಡೆದು ತೋರಿಸಿದ ಜೀವನ ಮೌಲ್ಯಗಳ ಪುನರುತ್ಥಾನಗೊಳಿಸಲು ಪರಮಪೂಜ್ಯರು ರೂಪಿಸಿದ ಹಲವಾರು ವಿಶಿಷ್ಟ ಕಾರ್ಯಕ್ರಮಗಳಲ್ಲಿ ಗ್ರಾಮಾಂತರ ಬಸವ ಜಯಂತಿ ಕಾರ್ಯಕ್ರಮ ಮುಕುಟಪ್ರಾಯವಾಗಿದೆ. ರೋಗಗ್ರಸ್ತ ಸಮಾಜಕ್ಕೆ ಕಾಯಕಲ್ಪ ನೀಡಿ ಅವರ ಬೌದ್ಧಿಕ ಹಾಗೂ ಮಾನಸಿಕ ವಿಕಾಸಕ್ಕೆ ಆರೋಗ್ಯಕರ ವಾತಾವರಣವನ್ನು ಮೂಡಿಸಲು ಪ್ರೇರಕ ಹಾಗೂ ಪೂರಕವಾಗಿರುವ ಬಸವ ಜಯಂತಿ ಕಾರ್ಯಕ್ರಮದ ಫಲ ನಮಗಿಂದು ಪ್ರತ್ಯಕ್ಷವಾಗಿ ಕಾಣಿಸದಿದ್ದರೂ ಪರೋಕ್ಷವಾಗಿ ಸಮಾಜದ ಮೇಲಾಗುವ ಪರಿಣಾಮ, ಪ್ರಯೋಜನ ಅನನ್ಯ, ಬೆಲೆ ಕಟ್ಟಲಾಗದಂತಹದು. ಪರಮಪೂಜ್ಯರ ಮಹತ್ವಾಕಾಂಕ್ಷೆಯ ದೂರದೃಷ್ಟಿಯ ಈ ಕಾರ್ಯಕ್ರಮ ಸಮಾಜದ ಉನ್ನತಿಗೆ ನಾಂದಿಯಾಗಿದೆ.



೧೯೬೯ ರಿಂದ ನಿರಂತರವಾಗಿ ನಡೆದುಕೊಂಡು ಬರುತ್ತಿರುವ ಬಸವ ಜಯಂತಿ ಕಾರ್ಯಕ್ರಮ ವರ್ಷದಲ್ಲಿ ಒಂದು ದಿನ ನಡೆಯುವ ಕಾರ್ಯಕ್ರಮವಲ್ಲ, ಇದು ವರ್ಷವಿಡೀ ನಡೆಸಿಕೊಂಡು ಬರುತ್ತಿರುವ ಉದ್ದೇಶಿತ ಕಾರ್ಯಕ್ರಮ. ಬಸವಾದಿ ಶರಣರ ಜೀವನ ಮೌಲ್ಯ, ಸಾಮಾಜಿಕ ಚಳುವಳಿಯ ಹಿನ್ನೆಲೆಯ ಬಗ್ಗೆ ಅರಿವು ಮೂಡಿಸುವ ಉದಾತ್ತ ಧ್ಯೇಯೋದ್ದೇಶಗಳ ನ್ನೊಳಗೊಂಡಿದೆ.

ಅನಕ್ಷರಸ್ಥರೇ ಹೆಚ್ಚಾಗಿ ತುಂಬಿರುವ ಗ್ರಾಮೀಣ ಪ್ರದೇಶದಲ್ಲಿ ಶರಣರ ಆಧ್ಯಾತ್ಮಿಕ ಹಾಗೂ ಸಾಮಾಜಿಕ ಚಿಂತನೆಗಳನ್ನು ಸುಲಭವಾಗಿ ಮನವರಿಕೆ ಮಾಡಿಕೊಡುವ ದೃಷ್ಟಿಯಿಂದ ಶ್ರವ್ಯ ಹಾಗೂ ದೃಶ್ಯ ಮಾಧ್ಯಮಗಳನ್ನು ಅರ್ಥಪೂರ್ಣವಾಗಿ ಬಳಸಿಕೊಳ್ಳಲಾಗುತ್ತಿದೆ.

ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ನಡೆಯುವ ಈ ಕಾರ್ಯಕ್ರಮದಲ್ಲಿ ಎರಡು ಗೋಷ್ಠಿಗಳನ್ನು ಏರ್ಪಡಿಸಲಾಗುತ್ತಿದೆ. ಈ ಎರಡೂ ಗೋಷ್ಠಿಗಳಲ್ಲಿ ಬಸವಣ್ಣನವರ ಹಾಗೂ ಅವರ ಸಮಕಾಲೀನ ವಚನಕಾರರ ಧಾರ್ಮಿಕ; ಸಾಮಾಜಿಕ ಕ್ರಾಂತಿಯ ವಿವಿಧ ಮುಖಗಳನ್ನು ಕುರಿತು ವಿದ್ವಾಂಸರು ಸರಳವಾಗಿ ಪರಿಚಯ ಮಾಡಿಕೊಡುತ್ತಾರೆ. ನಂತರ ಶ್ರೀಗಳವರು ತಮ್ಮ ಅನುಭವ ಜ್ಯೋತಿಯಿಂದ ಬೆಳಕನ್ನು ಚೆಲ್ಲುತ್ತಾರೆ. ಬಸವಣ್ಣನವರು ಬದುಕಿದ ರೀತಿ, ಅವರು ಬಿಟ್ಟು ಹೋದ ಜೀವನ ಮೌಲ್ಯಗಳು, ಅವರ ಚಿಂತನೆಗಳು ಇಂದಿನ ಪರಿಸ್ಥಿತಿಯಲ್ಲಿ ಎಷ್ಟರ ಮಟ್ಟಿಗೆ ಪ್ರಸ್ತುತ ಇತ್ಯಾದಿ ವಿಚಾರಗಳ ಬಗ್ಗೆ ಸೋದಾಹರಣವಾಗಿ, ಎಳೆಎಳೆಯಾಗಿ ಹನ್ನೆರಡನೆ ಶತಮಾನದ ಆಗಿನ ಸ್ಥಿತಿಯನ್ನು ಕಣ್ಣಮುಂದೆ ನಿಲ್ಲುವಂತೆ ಪರಿಚಯ ಮಾಡಿಕೊಡುತ್ತಾರೆ. ಜ್ಞಾನದಾಸೋಹದ ಜೊತೆಗೆ ಶ್ರೀ ಕ್ಷೇತ್ರದ ಸತ್ಸಂಪ್ರದಾಯದಂತೆ ಅನ್ನದಾಸೋಹವು ನಡೆಯುತ್ತದೆ.

ಸಂಜೆ ಸ್ಥಳೀಯ ಅರಳುವ ಪ್ರತಿಭೆಗಳಿಂದ ಸಂಗೀತ, ವಚನ ಗಾಯನ ಕಾರ್ಯಕ್ರಮ ನಡೆಯುತ್ತದೆ. ಅರಳುವ ಪ್ರತಿಭೆಗಳಿಗೆ ಸೂಕ್ತ ವೇದಿಕೆಯನ್ನು ಒದಗಿಸಿ ಕೊಡುವುದರ ಮೂಲಕ ಅವರಲ್ಲಿ ಸುಪ್ತವಾಗಿರುವ ಕಲೆ-ಸಾಹಿತ್ಯಕ್ಕೆ ನೀರೆರೆದು ಪೋಷಿಸಲಾಗುತ್ತಿದೆ. ನಂತರ ಶ್ರೀಕ್ಷೇತ್ರದ ಕಲಾವಿದರಿಂದ 'ಜಗಜ್ಯೋತಿ ಬಸವೇಶ್ವರ' ನಾಟಕ ಪ್ರದರ್ಶನ ನಡೆಯುತ್ತದೆ. ನುರಿತ ಕಲಾವಿದರ ಅಭಿನಯ, ನಾಟಕದಲ್ಲಿ ಬಳಸುವ ಆಧುನಿಕ ತಂತ್ರ, ಬೆಳಕು ಹಾಗೂ ಧ್ವನಿ ಸಂಯೋಜನೆ ಇವುಗಳಿಂದ ಪ್ರೇಕ್ಷಕರ ಮನಸ್ಸನ್ನು ಸೆರೆಹಿಡಿಯುವಲ್ಲಿ ಯಶಸ್ವಿಯಾಗುತ್ತಿದೆ. ನಾಟಕ ಮುಗಿಯುವವರೆಗೂ ಪೂಜ್ಯ ಶ್ರೀಗಳು ತದೇಕ ಚಿತ್ತದಿಂದ ವೀಕ್ಷಿಸಿ ಕಲಾವಿದರಿಗೆ ಪ್ರೋತ್ಸಾಹ

ನೀಡುವುದರ ಜೊತೆಗೆ ನಾಟಕದಲ್ಲಿನ ಲೋಪದೋಷಗಳ ಬಗ್ಗೆ ಸೂಕ್ತ ಮಾರ್ಗದರ್ಶನವನ್ನು ನೀಡುತ್ತಾರೆ. ಇದುವರೆಗೂ ನಡೆದ ಸುಮಾರು ೮೦೦ ಕ್ಕೂ ಹೆಚ್ಚು ಗ್ರಾಮಾಂತರ ಬಸವ ಜಯಂತಿ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ನಾಟಕವನ್ನು ವೀಕ್ಷಿಸುತ್ತಿರುವುದು ಒಂದು ಗಿನ್ನೀಸ್ ದಾಖಲೆ ಮಾಡುವಂತಹುದು. ಗ್ರಾಮಾಂತರ ಬಸವ ಜಯಂತಿ ಕಾರ್ಯಕ್ರಮದ ಬಗ್ಗೆ ಪರಮಪೂಜ್ಯರೇ ತಮ್ಮ ಪ್ರಸಾದ ವಾಣಿಯಲ್ಲಿ ಹೀಗೆ ಹೇಳಿದ್ದಾರೆ :

"ಶ್ರೀಮಠದ ಒಂದು ಸಾರ್ಥಕ ಹಾಗೂ ಪರಿಣಾಮದಾಯಕ ಯೋಜನೆ 'ಗ್ರಾಮಾಂತರ ಬಸವ ಜಯಂತಿ'ಯಾಗಿದೆ. ೧೯೭೯ ರಿಂದ ಪ್ರಾರಂಭವಾದ ಈ ಯೋಜನೆ ನಿರಂತರವಾಗಿ ನಡೆದು ಬಂದಿದೆ. ಈವರೆಗೆ ೭೨೮ ಗ್ರಾಮಗಳಲ್ಲಿ ಆಚರಣೆಯನ್ನು ಮಾಡಿದ ತೃಪ್ತಿ ಯೋಜನೆಯದಾಗಿದೆ. ಯೋಜನೆಯ ಬಹುಮುಖ್ಯ ಅಂಗ, ಶ್ರೀ ಜಗಜ್ಯೋತಿ ಬಸವೇಶ್ವರ ನಾಟಕದ ಪ್ರದರ್ಶನ. ನಾಟಕದ ತಂಡದಲ್ಲಿ ಒಂದುನೂರು ಮಂದಿ ಸೇವಾಶೀಲರಿದ್ದಾರೆ. ಶಿಕ್ಷಕರಿದ್ದಾರೆ, ವಿದ್ಯಾರ್ಥಿಗಳಿದ್ದಾರೆ. ನಾಟಕದ ಪ್ರದರ್ಶನದ ಅವಧಿ ಎಂಟರಿಂದ ಒಂಬತ್ತು ಘಂಟೆಗಳು. ರಾತ್ರಿ ಒಂಬತ್ತೂವರೆಗೆ ಪ್ರಾರಂಭವಾದರೆ ಬೆಳಗಿನ ಆರೂವರೆತನಕ ನಾಟಕ ಪ್ರದರ್ಶಿತವಾಗುತ್ತದೆ. ಗ್ರಾಮೀಣ ಜನತೆ ಸಿನಿಮಾ, ಟಿ.ವಿ.ಗಳ ಈ ಪ್ರಭಾವ ಕಾಲದಲ್ಲಿಯೂ ಭಕ್ತಿಯಿಂದ ನಾಟಕ ನೋಡಲು ಬರುತ್ತಾರೆ. ಬಸವ ಸಂದೇಶವನ್ನು ತಮ್ಮದಾಗಿಸಿಕೊಳ್ಳುವಲ್ಲಿ ಸಂತೋಷಿಸುತ್ತಾರೆ. ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಸಮಾವೇಶಗೊಳ್ಳುತ್ತಾರೆ. ನಾಟಕ ಮುಗಿದ ಸಂದರ್ಭದಲ್ಲಿ ಬಸವಣ್ಣನ ಪಾತ್ರಧಾರಿಗೆ ಅನೇಕ ಮುಗ್ಧರು ನಮಿಸಿ, ಗೌರವಿಸಿ, ಧನ್ಯರಾದೆವು ಎಂದುಕೊಳ್ಳುತ್ತಾರೆ. ನಮ್ಮಲ್ಲಿಗೆ ಬಂದು ತಮ್ಮ ಸಂತೋಷವನ್ನು ವ್ಯಕ್ತಪಡಿಸುತ್ತಾರೆ. ತತ್ತ್ವವನ್ನು ಪರಿಚಯಿಸುವ ಯೋಜನೆ ಸಾರ್ಥವಾಗುತ್ತಿದೆ ಎನಿಸುತ್ತದೆ.

ನಾಟಕದಲ್ಲಿ ಭಾಗವಹಿಸುವ ಶಿಕ್ಷಕ, ವಿದ್ಯಾರ್ಥಿಗಳಿಗೆ ಇದರಿಂದ ಪ್ರಯೋಜನವಾಗಿದೆ. ಅವರಿಗೆ ಅರಿವಿಲ್ಲದಂತೆಯೇ ಅವರಲ್ಲಿರುವ ಕಲಾಶಕ್ತಿ ಉತ್ತೇಜಿತವಾಗುತ್ತದೆ. ಕೆಲವರು ಸಂಗೀತದಲ್ಲಿ ವಿದ್ವಾನರಾಗುವತ್ತ ಮುನ್ನಡೆಯುತ್ತಿದ್ದಾರೆ. ವಿದ್ಯಾರ್ಥಿಗಳಂತೂ ವಚನಗಳನ್ನು ಅನಾಯಾಸವಾಗಿ ಹೃದ್ಗತವಾಗಿಸಿಕೊಳ್ಳುತ್ತಿದ್ದಾರೆ. ಒಬ್ಬಿಬ್ಬರು ಇಡೀ ನಾಟಕದ ಎಲ್ಲ ಪಾತ್ರಗಳ 'ಮಾತು'ಗಳನ್ನು ಚಾಚು ತಪ್ಪದೆ ನೆನಪಿನಲ್ಲಟ್ಟುಕೊಂಡಿದ್ದಾರೆ. ನಾಟಕ ಪ್ರದರ್ಶಿತವಾಗುತ್ತಿರುವ ಸಂದರ್ಭದಲ್ಲಿ ರಾತ್ರಿಯೆಲ್ಲಾ ಕಣ್ಮುಚ್ಚದೆ ಕೆಲಸ ಕಾರ್ಯಗಳಲ್ಲಿ ತತ್ಪರರಾಗುವ ಶಿಕ್ಷಕರ ಹಾಗೂ ವಿದ್ಯಾರ್ಥಿಗಳ ಸೇವೆ ಮರೆಯುವಂತಹುದಲ್ಲ. ಅವರೆಲ್ಲ ತಮ್ಮ ವೈಯಕ್ತಿಕ ತೊಂದರೆಗಳನ್ನು ಸಾವು ನೋವುಗಳನ್ನು ಮನಸ್ಸಿಗೆ ತಂದುಕೊಳ್ಳದೆ ಈ ಯೋಜನೆಯ ಯಶಸ್ಸಿಗೆ ಸಹಕರಿಸುತ್ತಿದ್ದಾರೆ.

ಈ ಯೋಜನೆಯನ್ನು ಮೆಚ್ಚಿ ಬುದ್ಧಿಜೀವಿಗಳು, ಗಣ್ಯಾತಿಗಣ್ಯರು, ಅಭಿಮಾನಿಗಳು ಅನೇಕ ಸಂದರ್ಭಗಳಲ್ಲಿ ತಮ್ಮ ಸದ್ಭಾವನೆಗಳನ್ನು, ಸಲಹೆಗಳನ್ನು, ಬದಲಾವಣೆಗಳನ್ನು ವ್ಯಕ್ತಪಡಿಸುತ್ತ ಬಂದಿದ್ದಾರೆ. ಹಲವಾರು ಮಠಾಧಿಪತಿಗಳು ಸಹಕರಿಸುವಲ್ಲಿ ಯೋಜನೆಗೆ ಶಕ್ತಿ ತುಂಬುತ್ತಿದ್ದಾರೆ. ಇದೆಲ್ಲವನ್ನೂ ಮನಸ್ಸಿಗೆ ತಂದುಕೊಂಡಾಗ *"ಸಂತೋಷಂ ಜನಯೇತ್ ಪ್ರಾಜ್ಞಃ ತದೇವ ಈಶ್ವರಪೂಜನಂ"* ಎಂಬ ಮಾತು ನೆನಪಾಗುತ್ತದೆ ಎಂದಿದ್ದಾರೆ.

ಗ್ರಾಮಾಂತರ ಬಸವ ಜಯಂತಿ ಕಾರ್ಯಕ್ರಮ ಕೇವಲ ಒಂದು ಸಾಂಸ್ಕೃತಿಕ ಕಾರ್ಯಕ್ರಮವಾಗದೆ ಅದು ಸಮಾಜವನ್ನು ಜಾಗೃತಿ ಗೊಳಿಸುವ, ಸಂಕುಚಿತ ಭಾವನೆಗಳನ್ನು ವಿಶಾಲಗೊಳಿಸುವ, ಅಂಧ ಶ್ರದ್ಧೆಗಳನ್ನು ದೂರಮಾಡುವ, ಅಂತರಂಗವನ್ನು ಅರಳಿಸುವ, ನೈತಿಕ ಶಿಕ್ಷಣ ನೀಡುವ ಗುರುತರವಾದ ಕಾರ್ಯಕ್ರಮವಾಗಿದೆ. ಶತಶತಮಾನಗಳಿಂದ ಸಮಾಜದಲ್ಲಿ ಬೇರು ಬಿಟ್ಟಿರುವ ಹಲವಾರು ಸಾಮಾಜಿಕ ಪಿಡುಗುಗಳನ್ನು ತೊಡೆದು ಹಾಕಲು ಅಗತ್ಯವಾದ ಮನೋಭೂಮಿಕೆಯನ್ನು ಸಿದ್ಧಪಡಿಸುವ ಪ್ರಕ್ರಿಯೆ ಗುಪ್ತಗಾಮಿಯಾಗಿ ನಡೆಯುತ್ತಿದೆ. ಜನರಲ್ಲಿ ಹೃದಯ ಪರಿವರ್ತಿಸಿ ಒಂದು ದಿನ ಅಥವಾ ಒಂದು ವರ್ಷದಲ್ಲಿ ಅಗದೇ ಹೋದರೂ ಕ್ರಮೇಣ ಅದರ ಪರಿಣಾಮ ಉಂಟಾಗುತ್ತದೆ.

ಪರಮಪೂಜ್ಯರು ತಮ್ಮ ಯೋಗ ಜೀವನದ ಅವಿಭಾಜ್ಯ ಅಂಗವನ್ನಾಗಿ ಮಾಡಿಕೊಂಡಿರುವ ಬಸವ ಜಯಂತಿ ಕಾರ್ಯಕ್ರಮವನ್ನು ನಡೆಸಲು ಗ್ರಾಮೀಣ ಬಂಧುಗಳು ತಾವಾಗಿಯೇ ಮುಂದೆ ಬಂದು ಬಿನ್ನಹ ಮಾಡಿಕೊಳ್ಳುತ್ತಾರೆ. ಒಂದು ನಿರ್ದಿಷ್ಟವಾದ ಗ್ರಾಮದಲ್ಲಿ ಕಾರ್ಯಕ್ರಮ ನಡೆದರೂ, ಸುತ್ತಮುತ್ತಲಿನ ಹತ್ತಾರು ಗ್ರಾಮಗಳ ಜನರು ಭಾಗವಹಿಸುತ್ತಾರೆ. ಕಾರ್ಯಕ್ರಮ ನಡೆಸುವ ಗ್ರಾಮದ ಸಮಸ್ತ ಜನರು ಜಾತಿಭೇದವಿಲ್ಲದೆ ಎಲ್ಲ ಹಂತಗಳಲ್ಲಿ ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಅಂದು ಗ್ರಾಮದಲ್ಲಿ ಹಬ್ಬದ ವಾತಾವರಣ. ಜನರು ಸಂಭ್ರಮದಿಂದ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುತ್ತಾರೆ. ಅನೇಕ ಗ್ರಾಮಗಳಲ್ಲಿ ಕಾರಣಾಂತರಗಳಿಂದ ಎರಡಾಗಿದ್ದ ಮನಸ್ಸುಗಳು ಒಂದಾಗಿ ಸಾಮರಸ್ಯದ ತಂಗಾಳಿ ಬೀಸುತ್ತಿರುವುದು ಈ ಕಾರ್ಯಕ್ರಮಕ್ಕೆ ದೊರೆತ ಯಶಸ್ಸು. ಬಡವ-ಬಲ್ಲಿದ, ಮೇಲು-ಕೀಳೆಂಬ ಭಾವನೆಯಿಲ್ಲದೆ ಎಲ್ಲರೂ ಒಟ್ಟಾಗಿ ಕಾರ್ಯಕ್ರಮದಲ್ಲಿ ಭಾಗವಹಿಸುವುದರಿಂದ ಭಾವೈಕ್ಯತೆ ಮೂಡುತ್ತಿದೆ. ಬಸವಣ್ಣನವರ ಧಾರ್ಮಿಕ ಹಾಗೂ ಸಾಮಾಜಿಕ ಕ್ರಾಂತಿಯ ಮುಖ್ಯೋದ್ದೇಶ ಇಲ್ಲಿ ಸಾಕಾರಗೊಳ್ಳುತ್ತಿದೆ.

*







# ಸಿದ್ಧರಾಮನ ಲೋಕಕಾರುಣ್ಯ

- ಟಿ.ಆರ್. ಮಹಾದೇವಯ್ಯ
೧೩೬, ೧ನೇ ಮೈನ್, ೧ನೇ ಬ್ಲಾಕ್,
ನಾಗರಬಾವಿ ೨ನೇ ಹಂತ,
ಬೆಂಗಳೂರು - ೫೬೦ ೦೭೨.

ಶಿವಯೋಗಿ ಸಿದ್ಧರಾಮ ಭೂಮಿಯ ಮಹೇಶ್ವರನೆಂದೇ ಖ್ಯಾತನಾದವನು. ನರತ್ವದಲ್ಲಿ ಹರತ್ವವನ್ನು ಅರಳಿಸಿ ನಿಂತ ಮಹಾನುಭಾವಿಯಾತ. ಕರ್ಮಯೋಗಿಯಾಗಿದ್ದವ ಶಿವಯೋಗಿಯಾಗಿ ಪರಿಪೂರ್ಣತೆಯತ್ತ ಸಾಗಿದ ಮಹಾಶರಣ. ಆತನನ್ನು ಕುರಿತು ಮಹಾಕಾವ್ಯವನ್ನು ಬರೆದ ಶಿವಕವಿ ರಾಘವಾಂಕ *'ನೆಟ್ಟ ಕಲ್ಲಲ್ಲ, ಸುಳಿವ ಶಾಸನ ವೆನ್ನುಂತೆ'* ಬಿತ್ತರಿಸಿದ್ದಾನೆ. ಮಹಾಶರಣನ ಕಾರ್ಯಕ್ಷೇತ್ರವು ಕೈಲಾಸಕ್ಕಿಂತ ಮಿಗಿಲೆಂದೂ, ಅದು ಅಷ್ಟಷಷ್ಟಿ ಕ್ಷೇತ್ರಗಳಿಗಿಂತ ಶ್ರೇಷ್ಠವೆಂದೂ ಆತ ಸಾರಿದ್ದಾನೆ. ಪರವಾದಿಗಳಿಗೆ ಹೀಗೆ ಸವಾಲನ್ನು ಹಾಕಿದ್ದಾನೆ :



*ಪೊನ್ನಲಿಗೆ ಕೈಲಾಸವಾ ಜಗದ*
*ಗುರು ಸಿದ್ಧರಾಮನೀಶ್ವರನಲ್ಲಿ ಮೆರೆವ ಗು*
*ಡ್ಡರು ಗಣೇಶ್ವರರಖಿಳ ಜನವಮರರವರ*
*ಸತಿಯರು ರುದ್ರಕನ್ನಿಕೆಯರು.*
*ನೆರೆದ ಶಿವಭವನಂಗಳಷಷ್ಟಿಕ್ಷೇತ್ರ*
*ನಿರುತವೆಂಬೆತ್ತಿದೆನು ಕಯ್ಯನಿದನಲ್ಲೆಂಬ*
*ಪರವಾದಿಯಾದವನ ಶಿರದೊಳಿಳುಹುವೆನೆನ್ನ*
*ವಾಮಪಾದುಕೆಯನು.*

(ಸಿದ್ಧರಾಮ ಚಾರಿತ್ರ್ಯ)

ಈ ಮಹಂತನನ್ನು ಕುರಿತು ಚಾಮರಸ ಕವಿ *"ನಿಖಿಳರಿಗೆ ಅರಿವ ಹಂಚಿದ ಅರ್ಥಿಗೆ ಚಿಂತಿತಾರ್ಥವನಿತ್ತು ಸಲಹಿದ ಭಾಗ್ಯದಾತ"* ನೆಂದು ಕೊಂಡಾಡಿದ್ದಾನೆ.

*ಕಂತುವೆನೆ ಕಂಗೆಡೆಸಿಯೊಳಪೊ*
*ಕ್ಕಂತರಂಗ ವಿಚಾರವಲ್ಲವ*
*ಸಂತೆಯಂಗಡಿಯಂತೆ ಸೊನ್ನಲಪುರದೊಳೊಡ್ಡಯಿಸಿ*
*ಚಿಂತಿತಾರ್ಥವನರ್ಥಿಗಿತ್ತು ನಿ*
*ರಂತರಖಿಳರಿಗರಿವನೀವ ಮ*
*ಹಂತನೆನಿಸಿದ ಸಿದ್ಧರಾಮಯ್ಯಂಗೆ ಶರಣಾರ್ಥಿ*

(ಪ್ರಭುಲಿಂಗಲೀಲೆ)

ಸಿದ್ಧರಾಮ ಅಪೂರ್ವ ವ್ಯಕ್ತಿತ್ವವುಳ್ಳ ಶರಣವರೇಣ್ಯ. ಬಸವಣ್ಣನವರನ್ನು ಬಿಟ್ಟರೆ ಆತನೇ ಅತ್ಯಂತ ಜನಾನುರಾಗಿಯಾದ ಶರಣ. ಸಿದ್ಧರಾಮ ಒಬ್ಬ ಆದರ್ಶ ಸಮಾಜಸೇವಕ. ಅದ್ಭುತ ಸಂಘಟನಾಕಾರ. ಅಸಾಧಾರಣ ಮಾನವತಾವಾದಿ. ಆತನು ಲೋಕೋಪಕಾರಕ ಕೆಲಸಗಳಲ್ಲಿ ಆಸಕ್ತ. ಸಾವಿರಾರು ಜನರನ್ನು ಅಂಥ ಕಾಮಗಾರಿ ಕೆಲಸಗಳಲ್ಲಿ ತೊಡಗಿಸಿ ತಾನೂ ಅವರೊಟ್ಟಿಗೆ ದುಡಿಯುತ್ತಿದ್ದನು. ನಿಜವಾದ ಅರ್ಥದಲ್ಲಿ ಆತ ಕರ್ಮಯೋಗಿ; ಕಾಯಕದ ಕಲಿ. ಇದಕ್ಕೆ ಪ್ರೇರಣೆ ಅವನ ಲೋಕಕಾರುಣ್ಯ ಮತ್ತು ಜೀವಜಂತುಗಳಲ್ಲಿ ಆತನಿಗಿದ್ದ ಅಂತಃಕರಣ.

ಕೆರೆಯಲ್ಲಿನ ತೀರ್ಥ, ಮನದಲ್ಲಿಯ ಸರ್ವಜೀವ ದಯಾಪರತ್ವ ಮೈದೆಗೆದಡೆ ನಿಮ್ಮ ಪಾದ ಸಾಕ್ಷಿ - ಇದು ಸಿದ್ಧರಾಮನ ಘೋಷಣೆ. ಸಕಲ ಜೀವಾವಳಿಯ ಬಗ್ಗೆ ಆತ ತಳೆದ ಕಳಕಳಿಯ ಪ್ರತೀಕವಿದು. ಸಿದ್ಧರಾಮನಿಗೆ ದೀನದಲಿತರನ್ನು, ಬಡವರನ್ನು, ಶ್ರಮಜೀವಿಗಳನ್ನು ಕಂಡರೆ ವಿಶೇಷ ಒಲವು, ಅನುಕಂಪ. ಅವರ ಊಟವೆಂದರೆ ಅಮೃತ ಸೇವನೆ ಮಾಡಿದಂತೆ ಎಂದಿದ್ದಾನೆ ಆತ :

*ಬಡವರ ಭೋಜನ ಭೋಗಿಸಿದವ ಭವಾನೀಪುತ್ರ ನೋಡಯ್ಯ*
*ಕಡವರ ಎಡೆಗೊಂಡವ ವಿಷ್ಣುವಿನ ವಂಶದವ ನೋಡಯ್ಯ*
*ಬಡವನ ಭೋಜನ ಅಮೃತ ಸೇವನ*
*ಕಡವರನಮೃತ ಸುರಾಪಾನ ನೋಡಾ*
*ಕಪಿಲಸಿದ್ಧಮಲ್ಲಿಕಾರ್ಜುನಾ.*

ಸಿದ್ಧರಾಮ ಬಡವರ ಬಂಧು, ಕೂಲಿ ಕೆಲಸಗಾರರ ನೆಚ್ಚಿನ ಒಡೆಯನಾದ್ದರಿಂದಲೇ ಅದ್ಭುತ ಸಂಘಟನಕಾರನೆನಿಸಿದ್ದನು. ಯಾವುದೇ ಕೆಲಸಕ್ಕಾಗಲಿ, ಸಾವಿರ ಸಾವಿರ ಸಾವಿರ ಜನ ಆತನ ಹಿಂದಿರುತ್ತಿದ್ದರು. ಸಿದ್ಧರಾಮ ಹೀಗೆ ಲೌಕಿಕ ಹಿತಾಸಕ್ತಿಯ ಕೆಲಸದಲ್ಲಿ

ಮಗ್ನನಾಗಿ ಜನಪ್ರಿಯ ಮುಖಂಡನಾಗಿ ಇದ್ದಾಗಲೇ ಅಲ್ಲಮಪ್ರಭುದೇವ ಅವನ ಬದುಕಿನ ರಂಗದಲ್ಲಿ ಪ್ರವೇಶಿಸಿದ್ದು! ಕರ್ಮಯೋಗಿಯೊಬ್ಬ ಒಳಗನರಿಯದೆ ಬಾಹ್ಯ ಚಟುವಟಿಕೆಗಳಲ್ಲಿ ಜೀವನ ಸವೆಸುತ್ತಿದ್ದಾನಲ್ಲಾ; ಅವನನ್ನು ಪೂರ್ಣವಾಗಿ ಅಂತರ್ಮುಖಿಯಾಗಿಸಬೇಕಲ್ಲವೆ? ಎನಿಸಿತು ಅವರಿಗೆ. ಪ್ರಭುದೇವ ಸಿದ್ಧರಾಮಲ್ಲಿಗೆ ಬಂದು ತಮ್ಮ ಬೆಳಕಿನ ಮಾತುಗಳಿಂದ ಅವನು ಅಂತರ್ಮುಖಿಯಾಗುವಂತೆ ಮಾಡಿದರು.

*"ದೇಹದೊಳಗೆ ದೇವಾಲಯವಿದ್ದು ಮತ್ತೆ ಬೇರೆ ದೇವಾಲಯವೇಕೆ?"* ಎಂದೂ *"ತನುವೆಂಬ ಏರಿಗೆ ಮನವೆಂಬ ಕಟ್ಟೆಯಮಾಡಿ, ಬಲಿದು ಷಡ್ಭಿಥಭಕ್ತಿಯೆಂಬ ಸೋಪಾನದಿಂದ ಪರಮಾನಂದ ಜಲವ ತುಂಬಿ ಕೆರೆಯ ಕಟ್ಟಬಲ್ಲವರಾರೂ ಕಾಣೆ ನಾನು ಕಟ್ಟಿದ ಕೆರೆ ಸ್ಥಿರವಾಯಿತ್ತು".*

ಎಂದೂ ಹೇಳಿ ಬಾಹ್ಯಕ್ರಿಯೆಗಳಿಗಿಂತ ಅಂತರಂಗದ ಕೃಷಿಯ ಕಡೆ ಗಮನ ಸೆಳೆದರು. ಅಷ್ಟೇ ಅಲ್ಲ, ಆತನನ್ನು ಕಲ್ಯಾಣಕ್ಕೆ ಕರೆದೊಯ್ದು ಬಸವಣ್ಣ, ಚನ್ನಬಸವಣ್ಣನೇ ಮೊದಲಾದ ಶರಣರ ಸಂಪರ್ಕ ಒದಗುವಂತೆ ಮಾಡಿದರು. ಸಿದ್ಧರಾಮನೇ ಹೇಳುವಂತೆ "ಆತ ಕಲ್ಯಾಣದ ಶರಣರಂತೆಯೇ ಆಗಿಬಿಟ್ಟನು:" *"ಶರಣರ ಇರವ ನೆನೆನೆನೆದು ಶರಣ ನಾದೆನಯ್ಯ".*

ಶರಣರ ನಡೆ–ನುಡಿಗಳ ಪ್ರಭಾವ ಆತನ ಮೇಲೆ ಎಷ್ಟರಮಟ್ಟಿಗಾಯಿತೆಂದರೆ ಕರ್ಮಯೋಗಿಯು ಶಿವಯೋಗಿಯಾಗಿ ಪರಿವರ್ತನೆ ಹೊಂದಿದ. ಇಡೀ ಶರಣ ಸಮುದಾಯವೇ ಈ ಪರಿವರ್ತನೆಯನ್ನು ಕಂಡು ನಲಿದಾಡಿತು; ಕೊಂಡು ತೊನೆದಾಡಿತು.

ಸಿದ್ಧರಾಮನ ಬದುಕಿನಲ್ಲಿ ಒಂದು ಅದ್ಭುತ ಬದಲಾವಣೆ ಕಾಣಿಸಿತು. ಸಹಜವಾಗಿಯೇ ಅದು ಅವನ ಗುಡ್ಡರ ಬದುಕಿನಲ್ಲಿ ಆಗಬೇಕಾಗಿತ್ತು. ಬಾಹ್ಯಕ್ರಿಯೆಗಳಲ್ಲೇ ಅವರು ತೊಡಗಿದ್ದರು. ಅಂತರಂಗದ ಬೆಳವಣಿಗೆ ಮಾತ್ರ ಶೂನ್ಯ. ಕೆರೆಗಳ ನಿರ್ಮಿಸಿ, ಬಾವಿ ತೋಡಿಸಿ, ಬೆಟ್ಟ ಕಡಿಸಿ ಸಮಗೊಳಿಸಿ ಜನರಿಗೆ ಬೇಸಾಯಕ್ಕೆ ಸಜ್ಜುಗೊಳಿಸುವ, ಬೆಂಗಾಡು ಸೀಮೆಯಲ್ಲಿ ಹಸರು ಮೂಡಿಸಲು ನೆರವಾದ. ಶ್ರಮದಾನದಿಂದ ಬಡವರ ಹಸಿವ ನೀಗಿದ. ಪಶುಪಕ್ಷಿಗಳಿಗೆ ಜೀವನೋಪಾಯ ಕಲ್ಪಿಸಿದ. ನಿರ್ಗತಿಕರಿಗೆ ಹಣ ಸಹಾಯ ಮಾಡಿ ಅವರು ಉದ್ಯೋಗಿಯಾಗಿ ದುಡಿಯುವಂತೆ ಮಾಡಿದ. ಇದರಿಂದಾಗಿ ಅನೇಕ ಕುಟುಂಬಗಳು ನೆಮ್ಮದಿಯಿಂದ ಬಾಳುವಂತಾಯಿತು. ಹೀಗೆ ಹತ್ತು ಹಲವು ವಿಧದಲ್ಲಿ ಲೋಕೋಪಕಾರಗೈದ ಸಿದ್ಧರಾಮನು ಲೋಕದ ದೊಡ್ಡ ಸಂಸಾರವನ್ನೇ ಕಟ್ಟಿಕೊಂಡಿದ್ದನು. ಸಹಾಯ ಯಾಚಿಸಿ ಬಂದವರಿಗೆ ಕರುಣೆ ತೋರಿ, ಗೋಳಾಡುತ್ತಾ ಬಂದವರಿಗೆ ಸಮಾಧಾನವನ್ನು ಹೇಳಿ ಸಂತೈಸುತ್ತ ಕರುಣಾಮೂರ್ತಿಯಾಗಿದ್ದನು. ಇಂಥ ಸಿದ್ಧರಾಮನಿಗೆ ಪ್ರಭುವಿನ ದಯೆಯಿಂದ ಸಾಕಾರನಿಷ್ಠೆಯು ಲೌಕಿಕ ನೆಲೆಯಲ್ಲಿ ಫಲವನ್ನು ನೀಡುತ್ತದೆ. ಆದರೆ ಆಂತರಿಕವಾಗಿ ಆತ್ಮನ ವಿಕಾಸಕ್ಕೆ ಸಹಾಯಕವಾಗುವುದಿಲ್ಲವೆಂಬುದನ್ನು ತಿಳಿದನು. ಇಷ್ಟಲಿಂಗದ ಮಹತ್ವ, ಅದರ ಅನುಸಂಧಾನ ಹೇಗೆ ಮಾನಸಿಕ ಪರಿವರ್ತನೆಗೆ ಕಾರಣವಾಗುತ್ತದೆ ಎಂಬುದನ್ನು ತಿಳಿದ ಸಿದ್ಧರಾಮ ಅದನ್ನು ಹೀಗೆ ಸ್ಮರಿಸಿದ್ದಾನೆ :

*ಕೆರೆ ತೊರೆ ದೇಗುಲಗಳ ಕಡೆಯಿಂದ ನಿಮ್ಮ ಕಂಡೆ*
*ಎಡಹುವ ಕಲ್ಲು ತೆಗೆವ ಮರೆಯಲ್ಲಿ ನಿಧಾನವ ಕಂಡೆ*
*ಎನ್ನ ಮರವೆಯ ತಮದಿ ಅದ್ರಿಗೆ ದಿನಮಣಿ ಜನಿಸಿದಂತೆ*
*ಕಪಿಲಸಿದ್ಧಮಲ್ಲಿಕಾರ್ಜುನ ಅಂಗವೆಂಬ ಭ್ರಾಂತು ಸ್ವಯವಾಯ್ತು*
*ಪ್ರಭುದೇವ ಕಾರುಣ್ಯದಿಂದ.*

ಒಳ ಅರಿವಿನ ಮಹತ್ವವನ್ನು ಇಷ್ಟಲಿಂಗೋಪಾಸನೆಯ ಅಗತ್ಯವನ್ನು ತನ್ನ ಪ್ರೀತಿಯ ಶಿಷ್ಯಸಮೂಹಕ್ಕೆ ತಿಳಿಸಿ ಅವರ ಕಣ್ಣ ತೆರೆಸಬೇಕೆಂದು ಸಿದ್ಧರಾಮ ಯೋಚಿಸಿದನು. ಕೇವಲ ಬಾಹ್ಯಕ್ರಿಯೆಯಲ್ಲಿ ತೊಡಗಿದ ತನ್ನವರನ್ನು ನೋಡಿದಾಗ ಸಿದ್ಧರಾಮ ತೆಗೆದ ಉದ್ಗಾರ ಇದು :

*ಕೆರೆಯನಗುಳಿಯಗುಳಿ ಗುಡ್ಡರು ತಮ್ಮೆಲುವ*
*ಸಣ್ಣಿಸಿಕೊಂಡರಲ್ಲದೆ*
*ತಮ್ಮ ಮನ ಮರವೆಯನಗಿದಗಿದು ಸಣ್ಣಿಸಲಿಲ್ಲ*
*ಕಲ್ಲು ಮಣ್ಣು ಹೊತ್ತುಕೊಂಡು ಗೋಣು*
*ನೋಯಿಸಿಕೊಂಡರಲ್ಲದೆ*
*ಜ್ಞಾನವ ಹೊತ್ತುಕೊಂಡು ಮನವೋಲಯಿಸಿಕೊಳ್ಳಲಿಲ್ಲ ನೋಡಾ*
*ಹೊಲದೋಟವ ಮಾಡಿ ಬಳಲಿದರಲ್ಲದೆ*
*ಕಪಿಲಸಿದ್ಧಮಲ್ಲಿಕಾರ್ಜುನನ ಪೂಜಿಸಿ ಬಳಲಲಿಲ್ಲ ನೋಡಾ!*

ಸಿದ್ಧರಾಮನ ಈ ಬಗೆಗಿನ ಚಿಂತೆ ಎಷ್ಟು ದೂರ ಹೋಗಿತ್ತೆಂದರೆ ಶರಣರ ಕಾಯಕ ಸಿದ್ಧಾಂತಕ್ಕೆ ಅದು ತಕ್ಕಂತೆ ಸ್ಪಂದಿಸಿತು. ದುಡಿಮೆಯ ಮೂಲಕ ಮೋಕ್ಷಕಾಣುವ ತತ್ವವಳವಟ್ಟಿತು. ಶಿವಯೋಗಿಯಾದರೂ ಸಹ ಧ್ಯಾನ ಜಪ ತಪಾದಿಗಳಲ್ಲಿ ವ್ಯರ್ಥವಾಗಿ ಕಾಲ ಸವೆಸಬಾರದು. ಸಾಧ್ಯವಾದಷ್ಟು ಕಾಯಕ ಮಾಡಬೇಕು. 'ಶಿವಯೋಗಿಯ ದೇಹ ವ್ಯಥಾ ಸವೆಯಲಾಗದು, ಅರ್ಪನಿತು ಸೇವೆ ಮಾಡಲೇಬೇಕು' – ಇದು ಸಿದ್ಧರಾಮನ ಗುರಿ. ಕ್ರಿಯಾಶೀಲ





ಬದುಕನ್ನು ಎತ್ತಿ ಹಿಡಿದ ಆತ ಆಂತರಂಗಿಕ ಕೃಷಿಗೂ ಗಮನಕೊಟ್ಟುದು, ಅಂತೆಯೇ ಬೋಧಿಸಿದ್ದು ಆತನ ಬಂಗಾರದ ವ್ಯಕ್ತಿತ್ವಕ್ಕೆ ಪರಿಮಳ ಮೂಡಿದಂತೆ ಆಗಿದೆ.

ಶರಣರ ಸಂಪರ್ಕದಿಂದ ಸಿದ್ಧರಾಮನ ಒಳಗಣ್ಣು ತೆರೆದುದು ಒಂದು ಅದ್ಭುತ ಘಟನೆಯಾದಂತೆಯೇ ಅವನ ವ್ಯಕ್ತಿತ್ವದ ತೇಜಸ್ವಿಯಾದ ಇನ್ನೊಂದು ಮುಖ ಗೋಚರಿಸಿತು. ಸಿದ್ಧರಾಮನಲ್ಲಿ ಅಡಗಿದ್ದ ಕವಿ ಜಾಗೃತನಾದನು. ಬಸವಾದಿ ಶಿವಶರಣರಂತೆಯೇ ಅನುಭಾವಿ ಸಿದ್ಧರಾಮ ಒಳ್ಳೆಯ ವಚನಕಾರನಾದನು. ಕರ್ಮಯೋಗಿ ಸಿದ್ಧರಾಮ ಶಿವಯೋಗಿಯಾದಂತೆಯೇ ವಚನಯೋಗಿಯೂ ಆದನು. ಸಿದ್ಧರಾಮನ ಸಾವಿರಕ್ಕೂ ಹೆಚ್ಚಿನ ವಚನಗಳು ದೊರೆತಿವೆ. ಆತ ಇಂಥ ವಚನಗಳಲ್ಲದೆ ಬಸವಸ್ತೋತ್ರ ತ್ರಿವಿಧಿ, ಮಿಶ್ರಸ್ತೋತ್ರ ತ್ರಿವಿಧಿ, ಅಷ್ಟೋತ್ತರಸ್ತೋತ್ರ ತ್ರಿವಿಧಿ, ಮಂತ್ರಗೋಪ್ಯ ಮೊದಲಾದುವನ್ನು ರಚಿಸಿದ್ದಾನೆ. ಈ ಸಿದ್ಧರಾಮನ ಸಾಹಿತ್ಯವು ವಿಚಾರದ ನೆಲೆ, ತಿಳಿವಿನ ನೆಲೆ ಎಂಬ ಅಗ್ಗಳಿಕೆಯನ್ನು ಪಡೆದಿದೆ. ಅವನ ವಚನಗಳಲ್ಲಿ ಅಪೂರ್ವ ವಿಚಾರಗಳು, ಅನುಭಾವಿಕ ನೆಲೆಯ ಚಿಂತನೆಗಳು ತುಂಬಿವೆ. ಅವು ಮತೀಯ ಮಟ್ಟವನ್ನು ಮೀರಿ ಸಮಸ್ತ ಮನುಕುಲದ ಉತ್ಥಾನವನ್ನು ಕುರಿತು ಇವೆ. ಸಿದ್ಧರಾಮನ ವಚನಗಳು ಪಂಡಿತ–ಪಾಮರರಿಬ್ಬರನ್ನೂ ತಲೆತೂಗಿಸುತ್ತವೆ. ಗಡುಚಾದ ವಿಷಯಗಳನ್ನು ಸರಳವಾಗಿ, ಸಾಮಾನ್ಯರ ಅನುಭವಕ್ಕೆ ನಿಲುಕುವ ನಿತ್ಯಜೀವನದಿಂದ ಆರಿಸಿದ ದೃಷ್ಟಾಂತಗಳ ಮೂಲಕ ಮನಗಾಣಿಸಿದ್ದಾನೆ. ಶುಷ್ಕವಾದುದನ್ನೂ ರಸದಾಯಿಯಾಗಿ ಹೇಳುವ ಮಾಂತ್ರಿಕ ಶಕ್ತಿ ಅವನ ಮಾತಿಗಿರುವುದನ್ನು ನಾವು ಕಾಣಬಹುದಾಗಿದೆ.

ಸಾಧನೆಯ ಹಾದಿಯಲ್ಲಿ ಬಹು ಎತ್ತರಕ್ಕೆ ಏರಿದ ಸಿದ್ಧರಾಮ ಸಮಷ್ಟಿಚೇತನವನ್ನು ತನ್ನೆತ್ತರಕ್ಕೆ ಏರಿಸಬೇಕೆಂಬ ಹೆಬ್ಬಯಕೆಯಿಂದ ಕೆಳಗಿಳಿದು ಮೊದಲಿನಂತೆಯೇ ಜನ ಸಾಮಾನ್ಯರೊಡನೆ ಬೆರೆತ. ಅಸಾಮಾನ್ಯತೆಗೇರಿದ್ದರೂ ಕೂಡಾ ಆತ ಲೌಕಿಕ ಜನರ ನಾಡಿನ ಮೇಲೆ ಬೆರಳಿಟ್ಟು ಅದಕ್ಕೆ ಸ್ಪಂದಿಸಿದ್ದಾನೆ. ಹೀಗಾದ್ದರಿಂದಲೇ ಆತನ ಅನೇಕ ವಚನಗಳು ಜನಸಾಮಾನ್ಯರ ಆಲೋಚನೆಗಳಿಗೆ ಮಿಡಿದಿವೆ; ಅವರ ಮುಗ್ಧ ಪ್ರಶ್ನೆಗಳಿಗೆ ಉತ್ತರ ಹೇಳಿವೆ; ಅವರ ಸಮಸ್ಯೆಗಳನ್ನು ಬಿಡಿಸಿವೆ; ನಿರಾಸೆ ಕವಿದ ಅವರ ಮನದಲ್ಲಿ ಆಶಾಜ್ಯೋತಿಯ ಬೆಳಗಿಸಿವೆ. ಸಿದ್ಧರಾಮನು ದೊಡ್ಡವನಾದುದು ಇಂಥ ಸಂವೇದನೆಯಿಂದಲೇ.

ಸಿದ್ಧರಾಮನ ವಚನಗಳು ಮುಮುಕ್ಷುಗಳಿಗೆ ಆಧ್ಯಾತ್ಮ ಸಾರವನ್ನು, ಅಜ್ಞಾನಿಗಳಿಗೆ ಜ್ಞಾನದ ಬೆಳಕನ್ನು, ಅನನುಭವಿಗಳಿಗೆ ಅನುಭವದ ಸಾರಾಯವನ್ನು, ಸಾಹಿತ್ಯಾಸಕ್ತರಿಗೆ ರಸದುಣಿಸನ್ನು, ಎಲ್ಲಕ್ಕಿಂತ ಮೇಲಾಗಿ ಮಾನವಾಂತಃಕರಣವನ್ನು ಒದಗಿಸುತ್ತವೆ. ಈ ಕಾರಣದಿಂದಲೇ ಶತಮಾನಗಳುರುಳಿದರೂ ಅವನ ವಚನಗಳು ನವನವೀನವಾಗಿ ಉಳಿದಿವೆ; ಇಂದಿಗೂ ಪ್ರಸ್ತುತವೆನಿಸಿವೆ.

ಅಂಥ ಒಂದೆರಡು ವಚನಗಳನ್ನಾದರೂ ಇಲ್ಲಿ ಉದಾಹರಿಸಬೇಕು :

ವಯಕ್ತಿಕ ಬದುಕು ನೀತಿಯುತವೂ ಉದಾತ್ತವೂ ಆಗದೆ ಆತ ಮಾಡುವ ಪೂಜೆಗೆ ಅರ್ಥವಿಲ್ಲ. ಅನ್ಯರಿಗೆ ಉಪಕರಿಸುವವನ, ಒಳ್ಳೆಯದನ್ನು ಹಾರೈಸುವವನ ಬದುಕು ಪರಮಪಾವನ :

*ಒಬ್ಬರ ಮನವ ನೋಯಿಸಿ, ಒಬ್ಬರ ಮನವ ಘಾತವ ಮಾಡಿ*
*ಗಂಗೆಯ ಮುಳುಗಿದಡೇನಾಗುವುದಯ್ಯ?*
*ಚಂದ್ರಮ ಗಂಗೆಯ ತಡಿಯಲ್ಲಿದ್ದಡೇನು? ಕಲಂಕ ಬಿಡದಾಯಿತ್ತಯ್ಯ*
*ಅದು ಕಾರಣ, ಮನವ ನೋಯಿಸದವನೆ,*
*ಒಬ್ಬರ ಘಾತವ ಮಾಡದವನೆ ಪರಮಪಾವನ*
*ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.*

ಪ್ರತಿಯೊಬ್ಬನಿಗೂ ಸಂಸ್ಕಾರವೆಂಬುದು ಬೇಕು. ಅದಿಲ್ಲದಿದ್ದರೆ ಆತ ಅನಾಗರಿಕ, ಕಾಡು ಮನುಷ್ಯನೆನಿಸುತ್ತಾನೆ; ಅಯೋಗ್ಯನೆನಿಸುತ್ತಾನೆ. ಶಿಲ್ಪಿಯ ಉಳಿಯಪೆಟ್ಟಿನ ಸಂಸ್ಕಾರ ಪಡೆದ ಕಲ್ಲು ಆಕಾರ ಹೊಂದಿ ಶಿಲ್ಪವೆನಿಸುತ್ತದೆ; ಪೂಜಾರ್ಹವಾಗುತ್ತದೆ. ಇಲ್ಲದಿದ್ದರೆ ಅದು ನಿಷ್ಪ್ರಯೋಜಕ ಕಲ್ಲೆನಿಸುತ್ತದೆ. ಜಡವಸ್ತುವಾಗಿಯೇ ಉಳಿಯುತ್ತದೆ. ಅದರಂತೆ ಮನುಷ್ಯ ಸಂಸ್ಕಾರವಂತನಾದರೆ ಯೋಗ್ಯನೆನಿಸುತ್ತಾನೆ. ಎಲ್ಲೆಲ್ಲೂ ಸಲ್ಲುವಂಥವನಾಗುತ್ತಾನೆ :

*ಕಟಿದ ಕಲ್ಲು ಲಿಂಗವೆನಿಸಿತು, ಕಟಿಯದ ಕಲ್ಲು ಕಲ್ಲೆನಿಸಿತು*
*ಪೂಜಿಸಿದ ಮಾನವ ಭಕ್ತನೆನಿಸಿದನು; ಪೂಜಿಸಿದ ಮಾನವ*
*ಮಾನವನೆನಿಸಿದನು.*
*ಕಲ್ಲಾದಡೇನು? ಪೂಜೆಗೆ ಫಲವಾಯಿತ್ತು*
*ಮಾನವನಾದಡೇನು? ಭಕ್ತಿಗೆ ಕಾರಣನಾದನು*
*ಕಲ್ಲು ಲಿಂಗವಲ್ಲ, ಲಿಂಗ ಕಲ್ಲಲ್ಲ ನೋಡಾ,*
*ಕಪಿಲಸಿದ್ಧಮಲ್ಲಿಕಾರ್ಜುನಾ.*

ಸ್ವರ್ಗ–ನರಕಗಳ ಕಲ್ಪನೆ ಮಾನವನ ಜೀವನದಲ್ಲಿ ಅದ್ಭುತ ಪರಿಣಾಮ ಬೀರಿದೆ. ಪಾಪ ಭೀತಿ, ಪುಣ್ಯದಾಸೆ ಹಾಗೂ ಸ್ವರ್ಗದ

ಹುಚ್ಚು ಮನುಷ್ಯನ ನಡವಳಿಕೆಗಳಲ್ಲಿ ಅಗಾಧ ಪರಿಣಾಮಗಳನ್ನು ತಂದುವು. ಆದರೆ *'ಸ್ವರ್ಗವೆಂಬುದು ಬೇರೆಲ್ಲೋ ಇದೆ. ಅಲ್ಲಿಗೆ ನಾನು ಹೋಗಬೇಕು'* ಎಂಬ ಗೀಳಿನಲ್ಲಿ ತಾನು ಈ ಲೋಕದಲ್ಲಿ ಮಾಡಬೇಕಾದ ಕೆಲಸಗಳನ್ನು ಮರೆತು, ಲೋಕದ ಜವಾಬ್ದಾರಿಗಳನ್ನು ಮರೆತು ಧ್ಯಾನಾಸಕ್ತನಾಗುವುದು ವಿಪತ್ಕಾರಿ. ಸತ್ತಮೇಲೆ ಸ್ವರ್ಗ ಸಿಕ್ಕುತ್ತದೆ ಎನ್ನುವುದಾಗಲೀ, '*ಕೈಲಾಸ*'ವೆಂಬುದು ಶಿವನ ನೆಲೆ. ಭಕ್ತಿಯ ಆಚರಣೆಯಿಂದ ತಾನು ಅಲ್ಲಿಗೆ ಹೋಗಬೇಕೆಂದು ಭಾವಿಸುವುದಾಗಲೀ ತಪ್ಪು. ಕೈಲಾಸವಾಗಲೀ, ಸ್ವರ್ಗವಾಗಲೀ ಸತ್ತಮೇಲೆ ಸಿಕ್ಕುವಂಥವೆಂಬ ಭ್ರಮೆ ಬೇಡ. ಅವು ಇದ್ದಾಗಲೇ ದೊರಕಿಸಿಕೊಳ್ಳಬೇಕಾದ ವಾಸ್ತವಗಳು. ತಪವ ಮಾಡಿದರೆ ಸ್ವರ್ಗ ಸಿಕ್ಕದು. ನಿರ್ಮಲ ಮನಸ್ಸಿನಿಂದ ಪರೋಪಕಾರ ಬುದ್ಧಿಯಿಂದ, ಸತ್ಯಶುದ್ಧವಾಗಿ ಮಾಡುವ ಕೆಲಸದಿಂದ ದೊರೆಯುವ ಸುಖವೇ ಮೋಕ್ಷ. ಅದು ನಡೆಯುವ ನೆಲೆಯೇ ಕೈಲಾಸ. "ಲಿಂಗದ ಕುರುಹ ತಿಳಿದು ಲಿಂಗಗುಣಂಗಳ ನತಿಗಳೆದು ಲಿಂಗವಾದುದೆ ಸ್ವರ್ಗ ನೋಡಯ್ಯ". ಶರಣ ಮಾರ್ಗದಲ್ಲಿ ನಡೆದು ಲಿಂಗಾಂಗ ಸಾಮರಸ್ಯ ಸಾಧಿಸಿದರೆ ಅದೇ ನಿಜವಾದ ಕೈಲಾಸ. ಅದಕ್ಕೆ ಸಿದ್ಧರಾಮ, ಜನರ ಕಲ್ಪನೆಯ ಕೈಲಾಸಬೆಟ್ಟದ ಬಗ್ಗೆ ವ್ಯಂಗ್ಯವಾಗಿ ಹೀಗೆ ನುಡಿದು ಜನರನ್ನು ಎಚ್ಚರಿಸಿದ್ದಾನೆ :

*ಕೈಲಾಸ ಕೈಲಾಸವೆಂದು ಬಡಿದಾಡುವ ಅಣ್ಣಗಳಿರಾ, ಕೇಳಿರಯ್ಯ*
*ಕೈಲಾಸವೆಂಬುದೊಂದು ಭೂಮಿಯೊಳಿರುವ ಹಾಳು ಬೆಟ್ಟ.*
*ಅಲ್ಲಿರುವ ಮುನಿಗಳೆಲ್ಲ ಜೀವಗಳ್ಳರು,*
*ಅಲ್ಲಿರ್ದ ಚಂದ್ರಶೇಖರನು ಬಹು ಎಡ್ಡ.*
*ಇದರಾಡಂಬರವೇಕಯ್ಯ? ಎಮ್ಮ ಪುರಾತನರಿಗೆ*
*ಸದಾಚಾರದಿಂದ ವರ್ತಿಸಿ*
*ಲಿಂಗಾಂಗ ಸಾಮರಸ್ಯವ ತಿಳಿದು*
*ನಿಮ್ಮ ಪಾದಪದ್ಮಗೊಳು ಬಯಲಾದ ಪದವೆ*
*ಕೈಲಾಸವಯ್ಯ ಕಪಿಲ ಸಿದ್ಧಮಲ್ಲಿಕಾರ್ಜುನಾ.*

ಹೀಗೆ ಸಿದ್ಧರಾಮ ತನ್ನ ಉಜ್ವಲ ಬದುಕಿನಿಂದ, ಬೆಳಕಿನ ಮಾತುಗಳಿಂದ ನಮಗಿಂದು ಎಲ್ಲರಿಗೂ ಬೇಕಾದವನೆನಿಸಿದ್ದಾನೆ. ಸಾಮಾನ್ಯ ವ್ಯಕ್ತಿಯೂ ಉದಾತ್ತತೆಗೆ ಏರಬಹುದೆಂಬುದಕ್ಕೆ ಆತನ ಬದುಕು ಉತ್ಕೃಷ್ಟ ಉದಾಹರಣೆಯಾಗಿದೆ. ಆತನ ವಚನಗಳು ಆ ದಿಸೆಯಲ್ಲಿ ದಾರಿದೀಪವಾಗಿವೆ. *

## ಶ್ರೀವಾಣಿ



ಜೀವನವೆನ್ನುವುದು ಒಂದು ಕಲೆ. ಸಂಗೀತ, ಸಾಹಿತ್ಯಾದಿ ಕಲೆಗಳಿದ್ದಂತೆ. ಕಲೆಯ ಸಿದ್ಧಿಗೆ ಸಾಧನೆ ಮುಖ್ಯ. ಸಂಗೀತವನ್ನು ಶಾಸ್ತ್ರೀಯವಾಗಿ ಹಲವಾರು ವರ್ಷಗಳ ಕಾಲ ಆ ಕಲೆಯನ್ನು ರೂಢಿಸಿಕೊಂಡ ಸಂಗೀತಗಾರ ಮಧುರವಾಗಿ ಹಾಡಿದರೆ ಶ್ರೋತೃಗಳಿಗೆ ಕರ್ಣಾನಂದವಾಗುತ್ತದೆ. ಆದರೆ ಅಭ್ಯಾಸವಿಲ್ಲದೆ ಕಲೆಯ ಗಂಧವಿಲ್ಲದವನು ಹಾಡಿದರೆ ಅದು ಗಾರ್ದಭ ಸಂಗೀತವಾಗುತ್ತದೆ. ಅದರಂತೆ ಸಾಹಿತ್ಯಾಭ್ಯಾಸವಿಲ್ಲದವನು ಸಾಹಿತ್ಯ ರಚನೆ ಮಾಡಿದರೆ ಅಪಹಾಸ್ಯಕ್ಕೆ ಗುರಿಯಾಗಬೇಕಾಗುತ್ತದೆ. ಅದರಂತೆ ಜೀವನ ಕಲೆಯನ್ನು ಅರಿಯದವನು ಸಮಾಜದಲ್ಲಿ ಹಗುರನಾಗ ಬೇಕಾಗುವುದು. ಆದರೆ ಈ ಜೀವನ ಕಲೆ ಒಂದು ದಿವಸದಲ್ಲಿ, ಒಂದು ತಿಂಗಳಲ್ಲಿ, ಒಂದು ವರ್ಷದಲ್ಲಿ ಬರುವಂಥದಲ್ಲ. ಆ ಕಲೆಯನ್ನು ರೂಢಿಸಿಕೊಳ್ಳಬೇಕಾದರೆ ಬದುಕಿನುದ್ದಕ್ಕೂ ನಿರಂತರ ಸಾಧನೆಯು ನಡೆಯಬೇಕು ''ಯಾವ ಮನುಷ್ಯನಲ್ಲಿಯೂ ನೂರಕ್ಕೆ ನೂರರಷ್ಟು ದುಷ್ಟಗುಣಗಳೂ ಇರುವುದಿಲ್ಲ.'' ಇದು ತತ್ತ್ವಜ್ಞಾನಿಗಳ ಮಾತು. ಒಳ್ಳೆಯದೂ ಇದೆ ಕೆಟ್ಟದ್ದೂ ಇದೆ. ಕೆಟ್ಟಗುಣಗಳ ಸಂಖ್ಯೆಯನ್ನು ಕಡಿಮೆ ಮಾಡಿಕೊಂಡು ಒಳ್ಳೆಯ ಗುಣಗಳ ಸಂಖ್ಯೆಯನ್ನು ಬೆಳೆಸಿಕೊಂಡಾಗ ಆದರ್ಶ ಪುರುಷನಾಗುತ್ತಾನೆ. ಈ ಸಂಖ್ಯೆ ಹೆಚ್ಚಾದಾಗ ಲೋಕಪೂಜ್ಯನಾಗುತ್ತಾನೆ. ಈ ಒಂದು ಸಾಧನೆ ನಿರಂತರವಾಗಿ ನಡೆಯಬೇಕು. ನಡೆಯುವಾಗ, ನುಡಿಯುವಾಗ, ವ್ಯವಹರಿಸುವಾಗ ತಿದ್ದಿಕೊಳ್ಳಬೇಕು. ಇದು ಚಿಕ್ಕಂದಿನಿಂದಲೂ ನಡೆಯಬೇಕು. ಹೀಗೆ ಕ್ರಮವರಿತ ಸಾಧನೆ ಒಂದು ಶಕ್ತಿಯಾಗಿ ಬೆಳೆಯುತ್ತದೆ. ಇದನ್ನು ಇಚ್ಛಾ ಶಕ್ತಿ ಎಂದು ಕರೆಯುತ್ತಾರೆ' ಇಂಥ ಇಚ್ಛಾಶಕ್ತಿಯನ್ನು ಬೆಳೆಸಿಕೊಂಡಾಗ ಮಾತ್ರ ವ್ಯಕ್ತಿ ಲೋಕವಂದ್ಯವಾಗುತ್ತಾನೆ.







# ಶರಣ ಧರ್ಮದ ಪ್ರಸ್ತುತತೆ

– ಡಾ. ಮಲ್ಲಿಕಾರ್ಜುನ ಶಿವಪ್ಪ ಲಠ್ಠೆ
೫೫, "ಶಿವ", ವಿಶ್ವೇಶ್ವರಯ್ಯನಗರ,
ಸೇಡಂ ರಸ್ತೆ, ಗುಲಬರ್ಗಾ.

**ಭಾ**ರತ ದೇಶ ಪ್ರಮುಖವಾಗಿ ಒಕ್ಕಲುತನದ ದೇಶ. ಈ ಪ್ರಮುಖ ಉದ್ಯೋಗದ ಜೊತೆಗೆ ಮತ್ತು ಹಲವಾರು ಉದ್ದಿಮೆಗಳು ಬೆಳೆದುಬಂದಿರುತ್ತವೆ. ನಮ್ಮ ದೇಶದಲ್ಲಿ ನೆಲ, ಜನಕ್ಕೆ ಕೊರತೆಯಿಲ್ಲ. ನಾವು ಹಾಕಿಕೊಳ್ಳುವ ಯೋಜನೆಗಳಿಗೂ ಕೊರತೆಯಿಲ್ಲ. ದುಡಿಯುವ ಜನತೆಗೂ ಕೊರತೆಯಿಲ್ಲ. ಆದರೂ, ದೇಶದ ಜನತೆಗೆ ಹೊಟ್ಟೆ ತುಂಬ ಅನ್ನ, ಮೈತುಂಬ ಬಟ್ಟೆ ಕೂಡ ದೊರಕದಂತಾಗಿದೆ. ಇದಕ್ಕೆ ಕಾರಣ ದುಡಿಮೆಯಲ್ಲಿ ಶ್ರದ್ಧೆ, ಪ್ರಾಮಾಣಿಕತೆಯ ಕೊರತೆಯಂದೇ ಹೇಳಬೇಕಾಗುತ್ತದೆ.

ಅಪ್ರಾಮಾಣಿಕತೆಯು ಅವಿಶ್ವಾಸ ದೋಷದಿಂದಾಗಿ, ದುಡಿಮೆಯಲ್ಲಿನ ಅಪ್ರಾಮಾಣಿಕತೆಯಿಂದಾಗಿ ಕೈಗೊಳ್ಳುತ್ತಿರುವ ಯೋಜನೆಗಳೆಲ್ಲವೂ ಸೋರಿ ಹೋಗುತ್ತಲಿವೆ. ಭ್ರಷ್ಟಾಚಾರ ತಲೆಯೆತ್ತಿ ಸ್ವಾರ್ಥ ಹೆಚ್ಚಾಗಿ ದುಡಿಯುವ – ದುಡಿಸಿಕೊಳ್ಳುವವರಲ್ಲಿ ಹೊಂದಾಣಿಕೆ ಇಲ್ಲದಂತಾಗಿದೆ. ಇದು ಬರಿಯ ಸರಕಾರೀ ಕ್ಷೇತ್ರಕ್ಕೆ ಸೀಮಿತವಾಗಿಲ್ಲ, ಪ್ರತಿಯೊಂದು ರಂಗದಲ್ಲಿಯೂ ಲಂಚದ ದುರ್ವಾಸನೆ ತುಂಬಿ–ತುಳುಕುತ್ತಲಿದೆ. ಅಲ್ಲಿ–ಇಲ್ಲಿ ದುಡಿಯುತ್ತಿರುವವರೆಲ್ಲರೂ ಪ್ರಮಾಣವಚನ ಸ್ವೀಕರಿಸುವಾಗ ನೌಕರಿಗೆ ಅಧಿಕಾರ ಪಡೆಯುವಾಗ ಮಾತ್ರ ಆಣೆಯಿಟ್ಟು ಪ್ರಮಾಣ ವಚನ ಸ್ವೀಕರಿಸಿದರೂ, ಖುರ್ಚಿಯ ಮೇಲೆ ಕುಳಿತಾಗ ಅದು ಅದರ ಬುಡಕ್ಕೆ ಬಿದ್ದು ಹೋಗುತ್ತದೆ. ಹೀಗೆ ಪ್ರಾಮಾಣಿಕತೆಗೆ, ವಿಶ್ವಾಸಕ್ಕೆ ಮಸಿ ಬಳಿಯುವ ಕಾರ್ಯದಲ್ಲಿ ತೊಡಗುವುದರಿಂದಾಗಿ ನಮ್ಮ ದೇಶದಲ್ಲಿ ಎಷ್ಟೇ ದವಸ–ದಾನ್ಯ, ಭೂಮಿ–ಸೀಮಿ–ದ್ರವ್ಯ ಇದ್ದರೂ ಅವುಗಳಿಗೆ ಅಲ್ಲಲ್ಲಿ ಇಲಿ–ಹೆಗ್ಗಣಗಳು ಹತ್ತುತ್ತಿರುವುದರಿಂದಾಗಿ ದೇಶದ ಭದ್ರತೆಗೆ ಧಕ್ಕೆ ಉಂಟಾಗಹತ್ತಿದೆ.

ಪ್ರಾಮಾಣಿಕರಾಗಿ, ವಿಶ್ವಾಸದಿಂದ, ಮಾನವೀಯತೆಯಿಂದ, ಬಾಳಲೆಂದೇ ಪ್ರತಿಯೊಂದು ಧರ್ಮದಲ್ಲಿ ನೀತಿ–ನಿಯಮಗಳಿವೆ. ಮತ ಧರ್ಮಾಚರಣೆಗಳಿವೆ; ಧರ್ಮ ಗ್ರಂಥಗಳಿವೆ. ನುಡಿ, ನಡೆ, ಆಚಾರ, ವಿಚಾರ ಹಾಗೂ ಜ್ಞಾನ, ಕ್ರಿಯೆಗಳ ಸುಂದರ ಸಮನ್ವಯ ಸಾಧಿಸುವ ಸಾಧಕಗಳಿವೆ, ಭಗವದ್ಗೀತೆ, ಬೈಬಲ್, ಕುರಾನಗಳು ಪ್ರಮಾಣ ಗ್ರಂಥಗಳಾಗಿರುತ್ತವೆ. ಅದೇ ರೀತಿ ಶಿವಶರಣರ ವಚನಗಳೂ ಕೂಡ ಪ್ರಮಾಣ ಗ್ರಂಥರೂಪದಲ್ಲಿ ಸೂಚಿಸಲಷ್ಟುತ್ತಿವೆ.

ವಚನಗಳು ಅಧರಕ್ಕೆ ಕಹಿಯಾದರೂ ಮೇಲಿಂದ ಮೇಲೆ ಉದರಕ್ಕೆ ಸಿಹಿ; ಕೂಡಲ ಸಂಗನ ಶರಣರ ವಚನ ಬೇವ ಸವಿದಂತೆ. ಮಾತೆಯೆಂಬುದು ಜ್ಯೋತಿರ್ಲಿಂಗ, ಜನತೆಯಲ್ಲಿ ಶ್ರದ್ದೆ–ನಂಬಿಕೆ ಹುಟ್ಟಿಸಿ ನಂಬಿದವರಿಗೆ ಪರಾತ್ಪರ ವಸ್ತುವಿನ ಸಾಕ್ಷಾತ್ಕಾರ ದರ್ಶನ ಮಾಡಿಸಿ ಕೊಡುತ್ತಿವೆ.

*ನಂಬರು ನಚ್ಚರು ಬರಿದೆ ಕರೆವರು*
*ನಂಬಲರಿಯರೀ ಲೋಕದ ಮನುಜರು*
*ನಂಬಿ ಕರೆದೊಡೆ ಓ ಎನ್ನನೆ ಶಿವನು?*
*ನಂಬದೆ ನಚ್ಚದೆ ಬರಿದೆ ಕರೆವರ*
*ಕೊಂಬ ಮೇಲೆ ಕೂಗೆಂದ ಕೂಡಲಸಂಗಮದೇವ*

ನಂಬಿಕೆಯೆನ್ನುವುದು ಕುರುಡು ನಂಬಿಕೆಯಾಗಬಾರದೆಂದು ಎಚ್ಚರಿಸಿದ್ದಾರೆ. ಇಹ–ಪರಗಳೆರಡರಲ್ಲಿಯೂ ಮನುಷ್ಯನು ತನ್ನ ಪ್ರಗತಿಗಾಗಿ ಪ್ರಾಮಾಣಿಕತೆಯಂತಹ ಜೀವನ ಮೌಲ್ಯವನ್ನು ಜೀವನವದಲ್ಲಿ ಅಳವಡಿಸಿಕೊಳ್ಳಬೇಕು. ಪ್ರಾಮಾಣಿಕತೆಯಿಂದ ದುಡಿಮೆಯೇ, ಉದ್ಯೋಗವೇ ಕಾಯಕ ಎನಿಸುವುದು. ಅಂಥ ಕಾಯಕವೇ ಕೈಲಾಸ ಎಂಬುದು ಶಿವಶರಣರ ಸಂದೇಶವಾಗಿರುವುದು.

ಬಸವಧರ್ಮ ಇಲ್ಲವೆ ಶರಣಧರ್ಮ ಚಿಂತನೆಗೆ ತೊಡಗುವಾಗ ಪ್ರಮುಖವಾಗಿ ಗೋಚರಿಸುವುದು ಕಾಯಕಧರ್ಮ. 'ಕಾಯಕ' ಎನ್ನುವುದು ಶರಣರು ಜಗತ್ತಿಗೆ ಕೊಟ್ಟಿರುವ ಒಂದು ಅದ್ಭುತ ಕೊಡುಗೆ. ಚಿರಂತನವೂ ಆದ ಮಹಾ ಮೌಲ್ಯವಾಗಿದೆ. ರಾಷ್ಟ್ರದ ಆರ್ಥಿಕ ಸಂಪತ್ತನ್ನು ಹೆಚ್ಚಿಸುವಲ್ಲಿ ಅತ್ಯುತ್ತಮ ಸಾಧನವಾಗಿದೆ. ಕಾಯಕವು ಸತ್ಯವೂ ಶುದ್ಧವೂ ಆದದ್ದಿದ್ದು ಅಹಂಕಾರ–ಮಮಕಾರಗಳನ್ನು ತೊಡೆದುಹಾಕುತ್ತದೆ. ಮೇಲು–ಕೀಳುಗಳನ್ನೆಣಿಸುವುದಿಲ್ಲ. ಪ್ರತಿಯೊಬ್ಬರಿಗೂ ಈ ಕಾಯಕ ಕಡ್ಡಾಯವಾಗುವುದರಿಂದ ವೈಯಕ್ತಿಕವಾಗಿಯೂ ಆರ್ಥಿಕ ಬಲ ಹೆಚ್ಚಿಸುತ್ತದೆ. ಆಧ್ಯಾತ್ಮದ ಮೆರಗಿನಿಂದ ಕಾಯಕವೇ ಕೈಲಾಸವೆನಿಸುತ್ತದೆ. ಹೀಗಾಗಿ ಲೋಕದ ಮಾನವರನ್ನು ಕಿತ್ತು ತಿನ್ನುತ್ತಿರುವ ಬಡತನ ಎನ್ನುವುದು ದೂರಾಗುತ್ತದೆ; 'Eradication of poverty' ಕಾಯದ

## ಶ್ರದ್ಧಾಂಜಲಿ



ನಾಡಿನ ಹಿರಿಯ ಜಾನಪದ ವಿದ್ವಾಂಸರೂ, ಗುಲ್ಬರ್ಗಾ ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ಕೇಂದ್ರದಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದ ಡಾ. ಮಲ್ಲಿಕಾರ್ಜುನ ಶಿವಪ್ಪ ಲಕ್ಕೆಯವರು ಇತ್ತೀಚೆಗೆ ಗುಲ್ಬರ್ಗಾದಲ್ಲಿ ರಾಜ್ಯಮಟ್ಟದ ಜಾನಪದ ವಿಚಾರಗೋಷ್ಠಿಯಲ್ಲಿ ಭಾಗವಹಿಸಿದ್ದಾಗಲೇ ನಿಧನರಾದರೆಂದು ತಿಳಿಸಲು 'ಸಿದ್ಧಗಂಗಾ' ವಿಷಾದಿಸುತ್ತದೆ.

ಜಾನಪದ ಹಾಗೂ ಶರಣ ಸಾಹಿತ್ಯ ಕ್ಷೇತ್ರಗಳಲ್ಲಿ ಅನುಪಮ ಸೇವೆ ಸಲ್ಲಿಸಿದ್ದ ಡಾ. ಎಂ.ಎಸ್. ಲಕ್ಕೆಯವರು ತಮ್ಮ ವಿದ್ವತ್‌ಪೂರ್ಣ ಕೃತಿಗಳ ಮೂಲಕ ಈ ಎರಡೂ ಕ್ಷೇತ್ರಗಳನ್ನು ಶ್ರೀಮಂತಗೊಳಿಸಿದ್ದರು. ಜಾನಪದ ಹಾಗೂ ಶರಣ ಸಾಹಿತ್ಯಕ್ಕೆ ಸಂಬಂಧಿಸಿದಂತೆ ನೂರಕ್ಕೂ ಹೆಚ್ಚು ಮೌಲಿಕ ಕೃತಿಗಳು ಬೆಳಕುಕಂಡಿವೆ.

ಸರಳತೆ, ಸಜ್ಜನಿಕೆಯನ್ನು ಮೈಗೂಡಿಸಿಕೊಂಡಿದ್ದ ಡಾ. ಲಕ್ಕೆಯವರು ಸ್ನೇಹ ಜೀವಿಯಾಗಿದ್ದರು. ಹಿರಿಯರ ಬಗ್ಗೆ ಅಪಾರ ಗೌರವವನ್ನಿಟ್ಟಿದ್ದ ಅವರು ಕಿರಿಯರಲ್ಲಿ ಪ್ರೀತಿ, ವಿಶ್ವಾಸ ಆತ್ಮೀಯತೆಯನ್ನಿಟ್ಟುಕೊಂಡಿದ್ದರು.

ಶ್ರೀಮಠಕ್ಕೂ ಡಾ. ಎಂ.ಎಸ್. ಲಕ್ಕೆಯವರಿಗೂ ಅವಿನಾಭಾವ ಸಂಬಂಧ. ಶ್ರೀಮಠದಲ್ಲಿ ನಡೆದ ಕಾರ್ಯಕ್ರಮದಲ್ಲಿ ಭಾಗವಹಿಸಿ ವಿದ್ವತ್‌ಪೂರ್ಣ ಉಪನ್ಯಾಸ ನೀಡಿದನ್ನು ಸಿದ್ಧಗಂಗಾ ಕೃತಜ್ಞತೆಯಿಂದ ಸ್ಮರಿಸುತ್ತದೆ. ಸಿದ್ಧಗಂಗಾ ಮಾಸ ಪತ್ರಿಕೆಗೆ ಅನೇಕ ಲೇಖನಗಳನ್ನು ನೀಡಿ ಪತ್ರಿಕೆಯ ಬೆಳವಣಿಗೆಗೆ ಅಮೂಲ್ಯ ಕೊಡುಗೆ ನೀಡಿದ್ದರು. ಪರಮಪೂಜ್ಯ ಶ್ರೀ ಶ್ರೀಗಳವರಲ್ಲಿ ಅಪಾರವಾದ ಭಕ್ತಿ ಗೌರವವನ್ನಿಟ್ಟುಕೊಂಡಿದ್ದರು. ಪರಮಪೂಜ್ಯ ಶ್ರೀ ಶ್ರೀಗಳವರ ಶತಮಾನೋತ್ಸವ ಸಂದರ್ಭದಲ್ಲಿ ಹೊರತರಲಿರುವ ನೂರೊಂದು ಗ್ರಂಥಗಳ ಮಾಲೆಯಡಿಯಲ್ಲಿ ತಮ್ಮದೊಂದು ಅಮೂಲ್ಯ ಕೃತಿಯನ್ನು ಇತ್ತೀಚೆಗೆ ಕಳುಹಿಸಿದ್ದರು ಹಾಗೂ ಪ್ರಕಟಣಾ ಸಮಿತಿಯ ಸದಸ್ಯರಾಗಿ ಅಮೂಲ್ಯ ಸಲಹೆಗಳನ್ನು ನೀಡಿದ್ದರು.

ಡಾ. ಲಕ್ಕೆ ಅವರ ನಿಧನದಿಂದ ಸಾಹಿತ್ಯ ಕ್ಷೇತ್ರಕ್ಕೆ ತುಂಬಲಾರದ ನಷ್ಟವಾಗಿದೆ. ಅವರ ಆತ್ಮಕ್ಕೆ ದಯಮಯಾನಾದ ಭಗವಂತನು ಚಿರಶಾಂತಿಯನ್ನು ನೀಡಲಿ ಎಂದು 'ಸಿದ್ಧಗಂಗಾ' ಭಾವಪೂರ್ಣ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.

ಕಳವಳವು ಹಿಂಗುತ್ತದೆ, ಮಾನಸಿಕ ನೆಮ್ಮದಿ ದೊರಕುತ್ತದೆ. ಜಾತಿ ಜಾತಿಗಳ ವಿನಾಶಕ್ಕೂ ಸಮಾನತೆಗೂ ಪ್ರೇರಣೆ ನೀಡುತ್ತದೆ.

ಕಾಯಕದಲ್ಲಿ ಸರಳತೆ, ಸಮಾನತೆ ಮತ್ತು ಸಹಜತೆ ಈ ಮೂರು ಕಾಯಕ ಸಿದ್ಧಾಂತದ ಮೂಲ ಬೇರುಗಳಿದ್ದಂತೆ. ದೇವರಾದರೂ ಕಾಯಕದಲ್ಲಿ ಒಲವು ತೋರಿ, ಪ್ರೀತಿಸಬೇಕು, ನಿಷ್ಠೆಯಿಂದ ದುಡಿಯಬೇಕು ಎಂದು ಸಾರಿದವರು ಬಸವಾದಿ ಶರಣರು. ಕಾಯಕದಲ್ಲಿ ಮೇಲು ಕೀಳು ಎಣಿಸಬಾರದೆಂದು ಕಾಯಕ ಯಾವುದೆಂದು ಕೇಳಬಾರದೆಂದಿರುವವರು ಶರಣರು.

*'ದೇವಸಹಿತ ಭಕ್ತ ಮನೆಗೆ ಬಂದಡೆ*
*ಕಾಯಕವಾವುದೆಂದು ಬೆಸಗೊಂಡನಾದಡೆ*
*ನಿಮ್ಮಾಣೆ ನಿಮ್ಮ ಪುರಾತನರಾಣೆ*
*ತಲೆದಂಡ ತಲೆದಂಡ ಕೂಡಲಸಂಗಮದೇವಾ*
*ನಿಮ್ಮ ಭಕ್ತರಲ್ಲಿ ಕುಲವನರಸಿದಡೆ ನಿಮ್ಮ ರಾಣಿವಾಸದಾಣೆ'*

ಎಂದು ಬಸವಣ್ಣನವರು ಹಾಡಿದ್ದಾರೆ. ಹೀಗೆ ಲಿಂಗ, ವಯಸ್ಸು, ಜಾತಿ ಮತವೆನ್ನದೆ ಕೆಳವರ್ಗದ ಜನರನ್ನು ಸ್ತ್ರೀ ಸಮೂಹವನ್ನು ಕಾಯಕ ಮಾಡಲು ಹಚ್ಚಿ, ವೈಯಕ್ತಿಕ ಆರ್ಥಿಕ ಅಭಿವೃದ್ಧಿಗೊಳಿಸುವುದರ ಜೊತೆಗೆ ದೇಶದ ಆರ್ಥಿಕ ಪ್ರಗತಿಯನ್ನು ಸಾಧಿಸಿರುವುದನ್ನು ಶರಣರ ವಚನಗಳಲ್ಲಿ ಎರಕಹೊಯ್ಯುತ್ತಿರುವುದು ನಿಚ್ಚಳವಾಗಿ ಕಾಣಬಹುದಾಗಿದೆ.

*ಕಾಯಕದಲ್ಲಿ ನಿರತನಾದಡೆ ಗುರುದರ್ಶನವಾದರೂ ಮರೆಯಬೇಕು,*
*ಲಿಂಗಪೂಜೆಯಾದರೂ ಮರೆಯಬೇಕು, ಜಂಗಮ*
*ಮುಂದಿದ್ದಡೆಯೂ ಹಂಗು ಹರಿಯಬೇಕು*
*ಕಾಯಕವೇ ಕೈಲಾಸವಾದ ಕಾರಣ, ಅಮರೇಶ್ವರ*
*ಲಿಂಗವಾಯಿತ್ತಾದರೂ ಕಾಯಕದೊಳಗು*

ಎಂದು ಆಯ್ದಕ್ಕಿ ಮಾರಯ್ಯ ಕಾಯಕವೇ ಕೈಲಾಸ ಎಂದು ಸಾರಿ ಕಾಯಕದ ಮಹತ್ವವನ್ನು ಹೆಚ್ಚಿಸಿರುವರು, ಆತ್ಮಸಾಕ್ಷಾತ್ಕಾರ, ಬಡತನ ನಿರ್ಮೂಲನೆ ಗುರಿಯಾಗಿತ್ತು.

ಕಾಯಕಧೀರರಾಗುವುದರ ಜೊತೆ ಜೊತೆಗೇ ದಾಸೋಹ ಪ್ರಿಯರೂ ಆಗಬೇಕೆಂದು ಸಾರಿರುವುದು ಶಿವಶರಣರ ಗಳಿಕೆ ಬಳಕೆಗಳ ಸಾಮೀಪ್ಯವನ್ನು ತಿಳಿಸಿಕೊಡುತ್ತವೆ. ಕಾಯಕ ಮತ್ತು ದಾಸೋಹ ಈ ಎರಡೂ ತತ್ತ್ವಗಳು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಕಾಯಕದ ಪರಿಶ್ರಮದಿಂದ ಅಂದಂದಿನ ದ್ರವ್ಯ ದಾಸೋಹದ ಮೂಲಕ ಅಂದಂದಿಗೆ ಸವೆಯಬೇಕು ಎಂಬುದು ಜೀವನ ನಿರ್ವಹಣೆಯ ಮಾರ್ಗವಾದಂತೆ. ಆತ್ಮೋದ್ಧಾರದ





ಸಾಧನೆಯೂ ಆಗಿತ್ತು. ಅಂತೆಯೆ ಶರಣರು ಈ ಕಾಯಕ ಮತ್ತು ದಾಸೋಹಗಳ ಮೂಲಕ ಪ್ರಪಂಚದಲ್ಲಿದ್ದುಕೊಂಡು ಪ್ರಾಪಂಚಿಕರಾಗಿ ಪಾರಮಾರ್ಥವನ್ನು ಗೆದ್ದುಕೊಂಡವರಾದರು.

ಉಪಾಸ್ಯ ಮೂರ್ತಿಗಳಾದ ಗುರುಲಿಂಗ ಜಂಗಮರಿಗೆ ತನುಮನ ಧನ ಅರ್ಪಿಸಿ ತ್ರಿವಿಧ ದಾಸೋಹಿಗಳೆನಿಸಿರುವರು. ಸತ್ಯ ಶುದ್ಧ ಕಾಯಕದಿಂದ ಗಳಿಸಿದ ದುಡ್ಡನ್ನು ಗುರುಲಿಂಗ ಜಂಗಮರಿಗೆ ಸಮರ್ಪಿಸುವುದೇ ಜಂಗಮ ಸೇವೆ, ಸಮಾಜ ಸೇವೆ ಎನಿಸಿರುತ್ತದೆ. ಇದರಿಂದ ಬಡವ ಶ್ರೀಮಂತರೆಂಬ ಭೇದ ಭಾವ ದೂರಾಗಿ, ಸಂಪತ್ತಿನ ಸದುವಿನಿಯೋಗವಾದಂತಾಗುತ್ತದೆ. ಇದು ಪುರೋಹಿತ ಶಾಹಿಯನ್ನು ಧಿಕ್ಕರಿಸುತ್ತದೆ, ರಾಜಶಾಹಿಯನ್ನು ಪ್ರತಿಭಟಿಸುತ್ತದೆ. ಅಂತೆಯೆ ಶರಣರು ಸೋಹಂ ಎಂದೆನಿಸದೆ ದಾಸೋಹಂ ಎಂದೆನಿಸುವರಯ್ಯಾ ಎಂದೂ ಪ್ರಾರ್ಥಿಸಿಕೊಂಡಿದ್ದಾರೆ. ಹೀಗಾಗುವುದರಿಂದ ತಾನೇ ತಾನಾಗಿ ಸಮಾನತೆ ತಲೆದೋರುತ್ತದೆ. Equal distribution of wealth ಎಂದೆನ್ನ ಬಹುದಾಗಿದೆ.

*'ಸೋಹಂ ಎಂಬುದದು ಅಂತರಂಗದ ಮದ ನೋಡಯ್ಯಾ*
*ಶಿವೋಹಂ ಎಂಬುದು ಬಹಿರಂಗದ ಮದ ನೋಡಯ್ಯಾ*
*ಈ ದ್ವಂದ್ವವನಳಿದು 'ದಾಸೋಹಂ' ಎಂದೆನಿಸಯ್ಯಾ*
*ಕಪಿಲಸಿದ್ಧ ಮಲ್ಲಿಕಾರ್ಜುನಾ'*

ಮತ್ತು

*'ಜನ್ಮ ಜನ್ಮಕ್ಕೆ ಹೋಗಲೀಯದೆ ಸೋಹಂ ಎಂದೆನಿಸದೆ*
*ದಾಸೋಹಂ ಎಂದೆನಿಸಯ್ಯಾ ಲಿಂಗ ಜಂಗಮ ಪ್ರಸಾದದ*
*ನಿಲವ ತೋರಿ ಬದುಕಿಸಯ್ಯಾ ಕೂಡಲಸಂಗಮದೇವಾ*
*ನಿನ್ನ ಧರ್ಮ.*

ಎಂಬ ಸಿದ್ಧರಾಮ ಶಿವಯೋಗಿ ಮತ್ತು ಬಸವಣ್ಣನವರ ವಚನಗಳಲ್ಲಿ ಈ ವಿಷಯವನ್ನು ಮೆಲಕು ಹಾಕಬಹುದಾಗಿದೆ. ಮನುಷ್ಯ ಸ್ವಾರ್ಥಿಯಾಗದೆ ಸಮಾಜದ ಇತರರೊಂದಿಗೆ ಕೂಡಿ ತಿನ್ನುವ–ಬಾಳುವ ಸದಾಚಾರಿಯಾಗಿ ದಾಸೋಹಿಯಾಗಿ ಬದುಕಬೇಕು. ಭಕ್ತಿ ಪಕ್ಷಕ್ಕೆ ಅಂಟಿಕೊಳ್ಳಬೇಕು. ಅಂತಿಲ್ಲದವನ ಬಾಳು ಕಾಗೆ ಕೋಳಿಗಳಿಗಿಂತಲೂ ಕೀಳು ಎಂದಿರುವರು

*'ಕಾಗೆ ಒಂದಗುಳ ಕಂಡಡೆ ಕರೆಯದೆ ತನ್ನ ಕುಲವನೆಲ್ಲವನು*
*ಕೋಳಿ ಒಂದುಗುಟುಕ ಕಂಡಡೆ ಕರೆಯದೆ ತನ್ನ ಬಳಗನೆಲ್ಲವನು*
*ಶಿವಭಕ್ತನಾಗಿ ಭಕ್ತಿ ಪಕ್ಷವಿಲ್ಲದಿದ್ದಡೆ ಆ ಕಾಗೆ-ಕೋಳಿಗಳಿಗಿಂತ*
*ಕರಕಷ್ಟ ಕಾಣಾ ಕೂಡಲಸಂಗಮದೇವಾ'*

ಶರಣರು ಕೊಟ್ಟ ಕೊಡುಗೆಗಳಲ್ಲಿ ಜನರ ಅಜ್ಞಾನ ನಿವಾರಣೆಯೂ ಒಂದಾಗಿದೆ. ಗುರುವಿನನ್ನು ನಂಬಿದ ಮೊರೆಹೊಕ್ಕ ಶರಣರು ಶಿವಪಥವನರಿದೊಡೆ ಗುರುಪಥವೆ ಮೊದಲು ಎಂದವರು, ಗುರುವಿನ ಕೃಪಾಕಟಾಕ್ಷದಿಂದ ಅಂಗದ ಮೇಲೆ ಲಿಂಗಧರಿಸಿ ಷಟ್‌ಸ್ಥಲ ಮಾರ್ಗಾವಲಂಬಿಗಳಾಗಿ, ಸತ್ಸಂಗ ಬಯಸಿದವರು ತನ್ನ ತಾನಾರೆಂದು ಅಂತರಂಗದ ಅರಿವು ಮೂಡಿಸಿಕೊಂಡವರು, ತಮ್ಮೊಳಗಿದ್ದ ಮಹಾ ಘನವನರಿದವರು, ಜ್ಞಾನದ ಬಲದಿಂದ ಅಜ್ಞಾನವನ್ನು ದೂರಮಾಡಿಕೊಂಡವರು. ಅರಿವೇ ಗುರು ಎಂದುಕೊಂಡವರು, ವೈಯಕ್ತಿಕವಾಗಿ ಮಾನವೀಯತೆಯನ್ನು ಸಾಮಾಜಿಕವಾಗಿ ರಾಷ್ಟ್ರ ಪ್ರೇಮವನ್ನು ಮೆರೆದವರು, ಲಿಂಗಸಂಗ ಬಯಸಿ ಸಾಧನೆಯಿಂದ ಲಿಂಗವೇ ಆದವರು,

*'ಅರಿಯದವರೊಡನೆ ಸಂಗವ ಮಾಡಿದೊಡೆ*
*ಕಲ್ಲಹೊಯ್ದು ಕಿಡಿಯ ತೆಗೆದುಕೊಂಬಂತೆ*
*ಬಲ್ಲವರೊಡನೆ ಸಂಗವ ಮಾಡಿದೊಡೆ*
*ಮೊಸರ ಹೊಸೆದು ಬೆಣ್ಣೆಯ ತೆಗೆದುಕೊಂಬಂತೆ*
*ಚೆನ್ನಮಲ್ಲಿಕಾರ್ಜುನಯ್ಯಾ ನಿಮ್ಮ ಶರಣರ ಸಂಗವ*
*ಮಾಡಿದೊಡೆ ಕರ್ಪುರದ ಗಿರಿಯನುರಿಕೊಂಬಂತೆ'*

ಎಂದು ಮಹಾದೇವಿಯಕ್ಕ ಶರಣರ ಸಂಗವಮಾಡಿ ಲಿಂಗವೇ ಆಗಿರುವ ಅನುಭವದ ಐಸಿರಿಯನ್ನು ಗುರುತಿಸಬಹುದಾಗಿದೆ. ಅಂತೆಯೆ ***"ಅರಿದೊಡೆ ಶರಣ ಮರೆದೊಡೆ ಮಾನವ"*** ಎಂದು ಜ್ಞಾನದ ಬಲದಿಂದ ಅಜ್ಞಾನದ ಕೇಡು ನೋಡಯ್ಯಾ ಹಾಗೂ 'ತನ್ನ ತಾನರಿದು ತಾನಾರೆಂದು ತಿಳಿದೊಡೆ ತಾನೆ ದೇವ' ಎಂದೂ ಹಾಡಿದವರು ತಪ್ಪು ತಿಳುವಳಿಕೆಯನ್ನು ಕಳೆದುಕೊಂಡು ಜ್ಞಾನಪಡೆದುಕೊಂಡವರು. ಶರಣರು ಅಜ್ಞಾನವನ್ನು ಹೋಗಲಾಡಿಸಿಕೊಂಡವರು (Liquidation of Ignorance).

ಶರಣರು ಮೇಲು ಕೀಳು ಎಣಿಸಲಿಲ್ಲ. ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಭಕ್ತರಾದವರೆಲ್ಲರನು ಒಂದೇ ಎಂದು ಬಗೆದವರು ಬಸವಣ್ಣನವರು.

*ದೇವ ದೇವ ಬಿನ್ನಪವನವಧಾರು*
*ವಿಪ್ರ ಮೊದಲು ಅಂತ್ಯಜ ಕಡೆಯಾಗಿ*
*ಶಿವಭಕ್ತರಾದವರೆಲ್ಲರನೊಂದೆ ಎಂಬೆ,*
*ಹಾರುವ ಮೊದಲು, ಶ್ವಪಚ ಕಡೆಯಾಗಿ*
*ಭವಿಯಾದವರಲ್ಲದನೊಂದೇ ಎಂಬೆ*
*ಹೀಗೆಂದು ನಂಬೂದೆನ್ನ ಮಾತು, ಈ ನುಡಿದ*
*ನುಡಿಯೊಳಗೆ ಎಳ್ಳು ಮೊನೆಯಷ್ಟು ಸಂದೇಹವುಳ್ಳಡೆ*
*ಹಲುಮೋರೆ ಮೂಗ ಕೊಯಿ, ಕೂಡಲಸಂಗಮದೇವಾ*

ಹೀಗೆ ಜಾತಿಭೇದ ನಿರ್ಮೂಲನೆ ಮಾಡಲು ಬಸವಾದಿ ಶಿವಶರಣರು ಪರಿಶ್ರಮಿಸಿರುವರು. ವರ್ಣಾಶ್ರಮಗಳಿಂದ ಏನೂ ಪ್ರಯೋಜನವಿಲ್ಲವೆಂದವರು, ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ಕೂಡಲಸಂಗನ ಶರಣರೆ ಕುಲಜರು ಎಂದೂ ಸಾರಿರುವರು.

*'ಕೊಲುವನೇ ಮಾದಿಗ ಹೊಲಸು ತಿಂಬುವನೇ ಹೊಲೆಯ*
*ಕುಲವೇನೊ ಆವದಿರ ಕುಲವೇನೊ?*
*ಸಕಲಜೀವಾತ್ಮರಿಗೆ ಲೇಸನೆ ಬಯಸುವ*
*ನಮ್ಮ ಕೂಡಲಸಂಗನ ಶರಣರೆ ಕುಲಜರು'*

ಶರಣಧರ್ಮ ಚಿಂತನೆಯಲ್ಲಿ ಹೊಲೆಯ, ಮಾದಿಗ ಎನ್ನುವುದು ಒಂದು ಜಾತಿಯಲ್ಲ. ಅದು ಪ್ರತಿಯೊಂದು ಕೋಮಿಗೂ ಅಂಟಿಕೊಂಡು ಬಂದಿರುವ ಒಂದು ಬಗೆಯ ರೋಗ. ಅವರವರ ಸ್ವಭಾವ ದೋಷದಿಂದಾಗಿ ಈ ರೋಗ ತಪ್ಪುವುದೇ ಹೊರತು, ಹುಟ್ಟು ಇಲ್ಲವೆ; ಅವರು ಕೈಕೊಂಡ ವೃತ್ತಿಯಿಂದಲ್ಲ. ಎಲ್ಲರನ್ನೂ ಸರಿಸಮಾನರೆಂದು ತೋರಿಸಿ ಕೊಟ್ಟಿದ್ದಾರೆ – ಶರಣರು. ಶರಣರು ಸೃಷ್ಟಿಸಿದ ಆದರ್ಶ ಸಮಾಜದಲ್ಲಿ ಅಸ್ಪೃಶ್ಯತೆ ಎಂಬುದು ಇಲ್ಲವೇ ಇಲ್ಲ. ಅಂಗದ ಮೇಲೆ ಲಿಂಗವಿದ್ದವರೆಲ್ಲರನೂ ಒಂದೇ ಎಂದು ಬಗೆದರು. ಶರಣಸತಿ, ಲಿಂಗಪತಿ, ತಪ್ಪದಂತೆ ನಡೆಯ ಹಚ್ಚಿದರು, ನುಡಿಯ ಹೇಳಿದರು. ಅದಕ್ಕೆಂದೇ ಅನುಭವ ಮಂಟಪದಂತಹ ಆಚಾರ–ವಿಚಾರಗಳ ಸುಂದರ ಸಮನ್ವಯದ ಕಮ್ಮಟ ಕೇಂದ್ರ ಸ್ಥಾಪನೆಯಾಯಿತು. ಪಾರ್ಲಿಮೆಂಟ್ ಮಾದರಿಯ ಈ ಕೇಂದ್ರ ಆಧ್ಯಾತ್ಮಿಕ ಪ್ರಯೋಗ ಶಾಲೆಯಾಯಿತು. ಎಲ್ಲರಿಗೂ ಸ್ತ್ರೀ–ಪುರುಷರಿಗೂ ಇಲ್ಲಿ ಪ್ರವೇಶವಿತ್ತು. ಇಲ್ಲಿ ಸಲ್ಲುವವರು ಎಲ್ಲೆಲ್ಲಿಯೂ ಸಲ್ಲಿದರು. ಅತ್ಮ ಶುದ್ಧಿಯೊಂದಿಗೆ ತಾವು ವೈಯುಕ್ತಿಕವಾಗಿ ಬೆಳೆಬೆಳೆದು ಸಮಾಜದ ಶುದ್ಧೀಕರಣವನ್ನು ಕೈಕೊಂಡರು. ಇದರಿಂದ ಉನ್ನತವಾದ ಜಾತ್ಯತೀತ ಸಮಾಜವೊಂದರ ನಿರ್ಮಾಣವಾಯಿತು. (Creation of classless society)

*'ದಾಸೀ ಪುತ್ರನಾಗಲಿ ವೇಶ್ಯಾಪುತ್ರನಾಗಲಿ*
*ಶಿವದೀಕ್ಷೆಯಾದ ಬಳಿಕ ಸಾಕ್ಷಾತ್ ಶಿವನೆಂದು ವಂದಿಸಿ*
*ಪೂಜಿಸಿ ಪಾದೋದಕ ಪ್ರಸಾದವ ಕೊಂಬುವುದೇ ಯೋಗ್ಯ*
*ಹೀಗಲ್ಲದೆ ಉದಾಸೀನವ ಮಾಡಿ ಬಿಡುವವರಿಗೆ*
*ಪಂಚ ಮಹಾ ಪಾತಕ ನರಕಕಾಣಾ ಕೂಡಲಸಂಗಮದೇವಾ'*

ಎಂದೂ

*ಇವನಾರವ ಇವನಾರವ ಇವನಾರವನೆಂದೆನಿಸದಿರಯ್ಯಾ*
*ಇವ ನಮ್ಮವ ಇವ ನಮ್ಮವ ಇವ ನಮ್ಮವನೆಂದೆನಿಸಯ್ಯಾ*
*ಕೂಡಲಸಂಗಮದೇವಾ–ನಿಮ್ಮ ಮನೆಯ ಮಗನೆಂದೆನಿಸಯ್ಯ*

ಎಂದು ಸಾರಿ ಬಸವಣ್ಣನವರು ವಿಶ್ವವಿಶಾಲ ಮನೋಭಾವ ಮೆರೆದಿರುವರು ಸರ್ವರನ್ನೂ ಸಮಾನದೃಷ್ಟಿಯಿಂದ ಕಂಡಿರುವರು.

ಶರಣಧರ್ಮ ತನ್ನನ್ನು ತಾನು ತಿಳಿದುಕೊಳ್ಳಲು ಪ್ರೇರೇಪಿಸುತ್ತದೆ. ತಾನಾರೆಂಬುದರ ಅರಿವು ಮೂಡಿಸಿಕೊಡುತ್ತದೆ. ಬಂಧನದಲ್ಲಿ ಸಿಲುಕಿಸದೆ ಸ್ವತಂತ್ರವಾಗಿ ಬೆಳೆಯ ಹಚ್ಚುತ್ತದೆ. ತನ್ನನ್ನು ತಾನೇ ಪೂಜಿಸಿಕೊಳ್ಳತ್ತದೆ. ಹೀಗೆ ಸ್ವತಂತ್ರವಾಗಿ ವಿಚಾರ ಮಾಡಲು ಪ್ರೇರೇಪಿಸುತ್ತದೆ. ಇದರಿಂದ ತಾನೂ ಬೆಳೆದು ತನ್ನ ಸಮಾಜವೂ ಬೆಳೆಯುತ್ತ ಹೋಗುತ್ತದೆ. ಅಂತೆಯೆ ಶರಣರು ಸಾಮಾಜಿಕ, ಧಾರ್ಮಿಕ, ಸಾಹಿತ್ಯಕ ಕ್ಷೇತ್ರಗಳಲ್ಲಿ ಕ್ರಾಂತಿ ಪುರುಷರೆನಿಸಿದಂತಿದೆ. ಸ್ತ್ರೀಯರಿಗೂ ನಿಮ್ನ ವರ್ಗದವರಿಗೂ ಮೇಲೆ ಬರಲು ಸರಿಸಮಾನವೆಂದು ತಿಳಿದುಕೊಳ್ಳಲು ವರ್ತಿಸಲು ಅವರಂತೆ ಇವರೂ ವಚನಕಾರರಾದರು, ಶರಣರಾದರು.

*'ಮೊಲೆ ಮುಡಿ ಬಂದರೆ ಹೆಣ್ಣೆಂಬರು*
*ಗಡ್ಡಮೀಸೆ ಬಂದಡೆ ಗಂಡೆಂಬರು*
*ನಡುವೆ ಸುಳಿದ ಆತ್ಮ ಗಂಡೂ ಅಲ್ಲ ಹೆಣ್ಣೂ ಅಲ್ಲ*
*ಕಾಣಾ ರಾಮನಾಥಾ'*

ಎಂದುದು ಸ್ತ್ರೀಯರಿಗೂ ಸರಿಸಮಾನ ಸ್ಥಾನ ನೀಡಿದ್ದರಿಂದ ಅಕ್ಕಮಹಾದೇವಿ, ಮೋಳಿಗೆ ಮಹಾದೇವಿಯಮ್ಮ, ನೀಲಾಂಬಿಕೆ, ನಾಗಲಾಂಬಿಕೆ, ಆಯ್ದಕ್ಕಿ ಲಕ್ಕಮ್ಮ ಮೊದಲಾದ ನೂರಾರು ಜನ ಶರಣೆಯರೂ ವಚನಕಾರರಾಗಿ ಕಂಗೊಳಿಸಿರುವರು.

*ಹೆಣ್ಣು ಹೆಣ್ಣಲ್ಲ ಹೆಣ್ಣು ರಾಕ್ಷಸಿಯಲ್ಲ*
*ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನಾ'*

ಎಂದು ಹಾಡಿ ಹೆಣ್ಣು ದೇವಿ ಎಂದು ಕೊಂಡಾಡಿರುವರು. ಬಸವಣ್ಣವನರು ಕೆಳವರ್ಗದವರನ್ನು ಕಕ್ಕುಲತೆಯಿಂದ ಅಪ್ಪಿಕೊಂಡು ಗೌರವಿಸಿದುದರಿಂದ ಎಲ್ಲರೂ ಸ್ವಾತಂತ್ರ್ಯದ ಸವಿಯನ್ನು ಉಣ್ಣುವಂತಾಯಿತು.

*'ಭಕ್ತಿಯಿಲ್ಲದ ಬಡವನಾನಯ್ಯಾ*
*ಕಕ್ಕಯ್ಯನ ಮನೆಯಲ್ಲೂ ಬೇಡಿದೆ*
*ಚನ್ನಯ್ಯನ ಮನೆಯಲ್ಲೂ ಬೇಡಿದೆ*
*ದಾಸಯ್ಯನ ಮನೆಯಲ್ಲೂ ಬೇಡಿದೆ*





*ಎಲ್ಲಾ ಪುರಾತರು ನೆರೆದು ಭಕ್ತಿ ಭಿಕ್ಷವನಿಕ್ಕಿದಡೆ*
*ಎನ್ನ ಪಾತ್ರೆ ತುಂಬಿತ್ತು ಕೂಡಲಸಂಗಮದೇವಾ'*

ಶರಣರು ಮೊದಲು ತಮ್ಮನ್ನು ತಾವು ತಿದ್ದಿಕೊಳ್ಳಲು ಹಚ್ಚಿದರು. ಲೋಕದ ಡೊಂಕ ನೀವೇಕೆ ತಿದ್ದುವಿರಿ? ಎಂದರು. ಮಾಂಸ ಪಿಂಡವನ್ನು ಮಂತ್ರ ಪಿಂಡವನ್ನಾಗಿ ಮಾಡಿಕೊಂಡರು. ಅಂತರಂಗ ಬಹಿರಂಗ ಶುದ್ಧಿಹೊಂದಿದರು. ಇದರಿಂದ ಏನೆಲ್ಲವನ್ನೂ ಸಾಧಿಸಿದರು. Establishment of individual freedom.

ಶರಣರು ವಿಶ್ವಾಸ ಶಾಂತಿ ಪಾಲನಾ ದೃಷ್ಟಿಯುಳ್ಳವರು. ಕಿಂಕರರ ಕಿಂಕರ ಎನ್ನುವ ಮನೋಭಾವದವರು.

*'ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ*
*ನಿಮ್ಮ ಪಾದ ಸಾಕ್ಷಿ, ಎನ್ನ ಮನ ಸಾಕ್ಷಿ*
*ಕೂಡಲಸಂಗಮದೇವಾ ಎನಗಿದೇ ದಿಬ್ಯ'*

ಎಂದೆಲ್ಲ ಸಾರಿದವರು. ಮನುಷ್ಯರಾಗಿ ಹುಟ್ಟಿ ಬಂದಿದ್ದೇವೆ ಎಂದಂದು ಸ್ತುತಿ ನಿಂದೆ ಬಂದರೂ ಮನದಲ್ಲಿ ಕೋಪ ತಾಳದೆ ಸಮಾಧಾನಿಯಾಗಿ ಇದ್ದವರು.

*'ಬೆಟ್ಟದ ಮೇಲೊಂದು ಮನೆಯ ಮಾಡಿ*
*ಮೃಗಗಳಿಗಂಜಿದೊಡೆಂತಯ್ಯಾ*
*ಸಂತೆಯೊಳಗೊಂದು ಮನೆಯ ಮಾಡಿ*
*ಶಬ್ದಕೆ ನಾಚಿದೊಡೆಂತಯ್ಯಾ*
*ಸಮುದ್ರದ ತಡೆಯಲೊಂದು ಮನೆಯ ಮಾಡಿ*
*ನೊರೆ ತೆರೆಗಳಿಗಂಜಿದೊಡೆಂತಯ್ಯಾ?*
*ಚೆನ್ನಮಲ್ಲಿಕಾರ್ಜುನದೇವ ಕೇಳಯ್ಯಾ*
*ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿ ನಿಂದೆಗಳು*
*ಬಂದಡೆ ಮನದಲಿ ಕೋಪವ ತಾಳದೆ*
*ಸಮಾಧಾನಿಯಾಗಿರಬೇಕು.'*

ಎಂದು ವೀರವಿರಾಗಿಣಿ ಮಹಾದೇವಿಯಕ್ಕ ಹಲವಾರು ದೃಷ್ಟಾಂತಗಳ ಮೂಲಕ ಈ ಲೋಕದಲ್ಲಿ ಹುಟ್ಟಿದ ಬಳಿಕ ಸ್ತುತಿ ನಿಂದೆಗಳು ಬಂದಡೆ ಮನದಲ್ಲಿ ಕೋಪ ತಾಳದೆ ಸಮಾಧಾನಿಯಾಗಿರಬೇಕು ಎಂದು ಲೋಕಕ್ಕೆ ಶಾಂತಿ ಮಂತ್ರ ಸಾರಿದ್ದಾಳೆ 'Maintanance of world peace' ಎಂದಂತೆ.

ಹೀಗೆ ಶರಣ ಧರ್ಮವು ವಿಶ್ವ ವಿಶಾಲವೂ ವಿಶ್ವ ಮಾನವ ಧರ್ಮವೂ ಆಗಿರುತ್ತದೆ. ಇದು ಸರ್ವಸಮಾನತೆಯನ್ನು ಸಾರುತ್ತದೆ. ದಯವಿಲ್ಲದ ಧರ್ಮವದಾವುದಯ್ಯ? ಎಂದೆಂದು ದಯವೇ ಧರ್ಮದ ಮೂಲವೆಂದು ಸಾರಿರುವುದು ಪ್ರತಿಯೊಬ್ಬರಿಗೂ ದುಡಿಯ ಹಚ್ಚುತ್ತದೆ. ದುಡಿದು ಗಳಿಸಿದ್ದನ್ನು ಸರ್ವರೂ ಕೂಡಿ ತಿನ್ನುವ ಕಾಯಕ ದಾಸೋಹ ಸಿದ್ಧಾಂತವಾಗಿದೆ. ಜಂಗಮಸೇವೆ ಈ ಸಮಾಜ ಸೇವೆಯೆನಿಸಿದೆ. ಕಾಯಕದ ಜೊತೆ ಜೊತೆಗೆ ಬರುವ ದಾಸೋಹದಲ್ಲಿ ಅಡಕವಾಗಿರುತ್ತದೆ. ಎಂಥ ಜನತಾ ಸೇವಕನಿಗೂ ಲಿಂಗಪೂಜೆ ಅವಶ್ಯ ಎಂದ್ಹೇಳಿ ನೈತಿಕ ನೆಲಗಟ್ಟಿನ ಮೇಲೆ ವ್ಯಕ್ತಿತ್ವ ನಿರ್ಮಾಣ ಮಾಡಿಕೊಳ್ಳಲು ಇಂಬುಮಾಡಿಕೊಟ್ಟರು. ದಿನನಿತ್ಯದ ವ್ಯವಹಾರದ ಕೊಡುಕೊಳಿಕೆಯಲ್ಲಿ ಇರಬೇಕಾದ ಪರಸ್ಪರ ನಂಬಿಕೆ, ವಿಶ್ವಾಸ, ಶ್ರದ್ಧೆ, ತನ್ನ ತಾನಾರೆಂದುಂದು ತಿಳಿಯುವ ಆತ್ಮ ಸಾಧನೆಗೆ ತೊಡಗಿರುತ್ತದೆ. ಪ್ರಪಂಚದಲ್ಲಿದ್ದು ಪಾರಮಾರ್ಥ ಸಾಧಿಸಹಚ್ಚುತ್ತದೆ. ಸತ್ಯವ ನುಡಿವುದೆ, ಆಚಾರವೆ ಸ್ವರ್ಗವೆನಿಸುತ್ತದೆ. ಅಂತೆಯೆ ೨೧ನೆ ಶತಮಾನದ ಶರಣರು ಕಲ್ಯಾಣವನ್ನು ಕೈಲಾಸವನ್ನಾಗಿ ಮಾರ್ಪಡಿಸಿದುದು.

ಇಂದಿನ ಕಲುಷಿತಗೊಂಡ ಪರಿಸರದಲ್ಲಿ, ಶರಣರು ಅಂದು ಅರಿತು – ಆಚರಿಸಿ ಅನುಭವಿಸಿ, ಅಭಿವ್ಯಕ್ತಗೊಳಿಸಿದ ವಚನ ಸಾಹಿತ್ಯವನ್ನು ಓದಿ, ಕೇಳಿ, ಅರ್ಥೈಸಿಕೊಂಡಾಗ; ಚಿಂತನ–ಮಂಥನ ಮಾಡಿದಾಗ ನಮ್ಮ ಜನ್ಮ ಸಾರ್ಥಕವಾಗುತ್ತದೆ.

ನಮ್ಮ ದೇಶದ ಬಡತನ ನಿವಾರಣೆಗೆ ಶರಣರು ಸಾರಿದ ಕಾಯಕ ತತ್ವದ ಆಚರಣೆ ರಾಮಬಾಣವಿದ್ದಂತೆ. ಬಡವ ಶ್ರೀಮಂತ ಭೇದ ಭಾವ ಅಳಿಸಿಹಾಕಿ ಸಂಪತ್ತಿನ ಸಮಹಂಚಿಕೆಯಾಗಲು ದಾಸೋಹ ತತ್ತ್ವ ಮಹತ್ವದ ಪಾತ್ರ ವಹಿಸುವಂತಿದೆ. ಶರಣರು ಸಾರಿರುವ ವಿಶ್ವಧರ್ಮದ ತತ್ತ್ವಗಳಿಂದ ಕೂಡಿದ ವಚನಗಳು ಅಜ್ಞಾನವನ್ನು ಹೋಗಲಾಡಿಸುತ್ತದೆ. ಸಕಲ ಜೀವಾತ್ಮರಿಗೆ ಲೇಸ ಬಯಸುವ ಶರಣಧರ್ಮ ಜಾತ್ಯತೀತ ಸಮಾಜವನ್ನು ನಿರ್ಮಾಣ ಮಾಡುತ್ತಿದೆ. ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ ಎಂದು ಸಾರಿ ಸ್ತ್ರೀಯರಿಗೆ ಸರಿಸಮಾನ ಸ್ಥಾನ–ಮಾನ ನೀಡಿದ ಈ ಶರಣಧರ್ಮ ವ್ಯಕ್ತಿ ಸ್ವಾತಂತ್ರ್ಯಕ್ಕೆ ಪ್ರಾಸಸ್ತ್ಯ ನೀಡಿದೆ. ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು ಎಂದು ಸಾರಿದ ಶರಣರ ವಚನಗಳು ಲೋಕಕ್ಕೆ ಶಾಂತಿ ಮಂತ್ರವನ್ನು ಬೋಧಿಸುತ್ತವೆ. ಇಂಥ ಉನ್ನತವಾದ ವಚನ ಸಾಹಿತ್ಯ ವ್ಯಷ್ಟಿ ಮತ್ತು ಸಮಷ್ಟಿ ಪ್ರಜ್ಞೆಗೆ ಅಭಿವೃದ್ಧಿಗೆ ಹಿಡಿದ ಕನ್ನಡಿಯಾಗಿದೆ. ಪ್ರಸ್ತುತ ಅಲ್ಲೋಲ–ಕಲ್ಲೋಲ ಜಗತ್ತಿಗೆ ಅವ್ಯವಸ್ಥೆಯ ಸಮಾಜಕ್ಕೆ ಶಾಂತಿ ಸಮಾಧಾನ ತರುವಲ್ಲಿ ವಚನಗಳ ಅಧ್ಯಯನ, ಶರಣಧರ್ಮ ಸಿದ್ಧಾಂತ ಬೋಧನೆ ತೀರ ಅತ್ಯವಶ್ಯವಾಗಿರುತ್ತದೆ. □

# ಶರಣ ಸಂಸ್ಕೃತಿ

– ಡಾ. ಸಿ.ಪಿ. ಕೃಷ್ಣಕುಮಾರ್
ನಿವೃತ್ತ ಪ್ರಾಧ್ಯಾಪಕರು,
ಮಾನಸ ಗಂಗೋತ್ರಿ, ಮೈಸೂರು.

ಶರಣ ಸಂಸ್ಕೃತಿ ವಿಶಿಷ್ಟವೂ ಶ್ರೇಷ್ಠವೂ ಆದದ್ದು; ಅದರ ಕೆಲವು ಮುಖಗಳ ಸ್ಥೂಲವಾದ ನೋಟ ಇಲ್ಲಿ ಉದ್ದಿಷ್ಟವಾಗಿದೆ. ತಿರುಳಿನ ದೃಷ್ಟಿಯಿಂದ ಅದು ಶರಣ ಸಂಸ್ಕೃತಿ; ಅಭಿವ್ಯಕ್ತಿಯ ದೃಷ್ಟಿಯಿಂದ ವಚನ ಸಂಸ್ಕೃತಿ ಕೂಡ. ಮುಖ್ಯವಾದ ಮಾತೆಂದರೆ, ವಚನ ಸಾಹಿತ್ಯ ಕಾವ್ಯಪ್ರಕಾರವಾಗುವುದಕ್ಕಿಂತ ಮಿಗಿಲಾಗಿ ಜೀವನ ಪ್ರಕಾರವಾಗಿದೆ; ಅದು ಜೀವನ ವಿಧಾನವೂ ಹೌದು, ಸಂವಿಧಾನವೂ ಹೌದು !

ಸಂಸ್ಕೃತಿ ಎಂದರೇನು? ಪ್ರಕೃತಿಯಲ್ಲದ್ದು; ಪ್ರಾಣಿಸ್ಥಿತಿಯನ್ನು ಮೀರಿದ್ದು; ಸಂಸ್ಕಾರ ಮೂಲವಾದುದು. 'ಸಮ್ಯಕ್ ಕೃತಿ' ಎಂಬುದರಿಂದ ನಿಷ್ಪನ್ನವಾದುದು 'ಸಂಸ್ಕೃತಿ' ಶಬ್ದ; 'ಸಮ್ಯಕ್ ಕೃತಿ' ಎಂದರೆ ಚೆನ್ನಾಗಿರುವಂತೆ ಮಾಡುವುದು, ಒಳ್ಳೆಯದನ್ನಾಗಿಸುವುದು, ಶುದ್ಧಿಮಾಡಿ ಉತ್ತಮಪಡಿಸುವುದು ಎಂದರ್ಥ.

'ಸಂಸ್ಕೃತಿ'ಗೆ ಸಮಾನಾರ್ಥಕವಾದ ಆಂಗ್ಲ ಶಬ್ದ 'ಕಲ್ಚರ್' (culture) ವ್ಯವಸಾಯ ಎಂಬುದು ಅದರ ಮೂಲಾರ್ಥ. ಎಂದರೆ ಹೃದಯಕೃಷಿ, ಒಂದು ಬಗೆಯ ಆತ್ಮಶಿಕ್ಷಣ, ಆತ್ಮಪರಿಪಾಕ ಸಂಸ್ಕೃತಿಯ ಸುಲಕ್ಷಣಗಳು. ಮಾಥ್ಯೂ ಅರ್ನಾಲ್ಡ್ ಎಂಬ ವಿಮರ್ಶಕ ಸಂಸ್ಕೃತಿಯನ್ನು 'ಮಾಧುರ್ಯ ಮತ್ತು ಕಾಂತಿ (Sweetness and Light) ಎಂದು ಸಮರ್ಪಕವಾಗಿ ಲಕ್ಷಣೀಕರಿಸುತ್ತಾನೆ. ಶರಣ ಸಂಸ್ಕೃತಿ ಇವುಗಳ ಮೂರ್ತರೂಪವಾಗಿದೆ. (ಅದು ಮಾಧುರ್ಯ : ಏಕೆಂದರೆ, ಶರಣರದು ಮಧುರ ಭಾವ; ಅದು ಕಾಂತಿ : ಏಕೆಂದರೆ, ಅವರ ಪಾಲಿಗೆ "ಮಾತೆಂಬುದು ಜ್ಯೋತಿರ್ಲಿಂಗ").

'ಸಂಸ್ಕೃತಿ'ಯೊಡನೆ 'ನಾಗರಿಕತೆ'ಯನ್ನೂ ನಾವು ಪರಿಗಣಿಸಬೇಕು. ಇದೊಂದು ಒಳ್ಳೆಯ ಲಕ್ಷಣೀಕರಣ : "ನಾವು ಏನು ತಯಾರಿಸುತ್ತೇವೋ ಅದು ನಾಗರಿಕತೆ ; ನಾವು ಏನಾಗಿದ್ದೇವೋ ಅದು ಸಂಸ್ಕೃತಿ!" ಎಂದರೆ, ಸಂಸ್ಕೃತಿ ಎನ್ನುವುದು ಸ್ವಸ್ವರೂಪ. (ಇಂದು ಸಮಾಜದಲ್ಲಿ ನಾಗರಿಕತೆ ಬೇಕಾದಷ್ಟಿದೆ, ಸಂಸ್ಕೃತಿಗೇ ಕೊರತೆ).

ಎರಡು ಮುಖಗಳನ್ನುಳ್ಳದ್ದು ಸಂಸ್ಕೃತಿ : ಒಂದು ಮುಖ ಮೌಲ್ಯ ಸಮುದಾಯದ ಅನುಷ್ಠಾನದಲ್ಲಿದೆ ; ಮತ್ತೊಂದು ದೈನಂದಿನ ನಡೆ, ನುಡಿಗಳ ಪರಿಯಲ್ಲಿದೆ. ಬದುಕಿನ ಸಣ್ಣ ಸಣ್ಣ ಸಂಗತಿಗಳಲ್ಲೂ, ಕ್ಷಣಕ್ಷಣವೂ ವ್ಯಕ್ತವಾಗತಕ್ಕದ್ದು ಸಂಸ್ಕೃತಿ; ಅಂತಿಮವಾಗಿ ಉದ್ದಿಷ್ಟವಾದುದು ಪರಿಪೂರ್ಣತೆಯ ಸಿದ್ಧಿ. ಅದು ಸಮಾಜದೊಡನೆ ವ್ಯವಹರಿಸುವ ರೀತಿ ಮತ್ತು ನೀತಿ; ಸದಾ ಸೂಸಬೇಕಾದ ಆತ್ಮ ಪರಿಮಳ. "Trifles make perfection and perfection is not trifle!" (ಕ್ಷುಲ್ಲಕ ಸಂಗತಿಗಳು ಪರಿಪೂರ್ಣತೆಯನ್ನು ರೂಪಿಸುತ್ತವೆ ; ಆದರೆ ಪರಿಪೂರ್ಣತೆ ಕ್ಷುಲ್ಲಕವಲ್ಲ) ಎಂಬುದೊಂದು ಚಮತ್ಕಾರ ಸ್ಪರ್ಶವನ್ನುಳ್ಳ ಅರ್ಥಪೂರ್ಣ ಸೂಕ್ತಿ.

ಶರಣ ಸಂಸ್ಕೃತಿಯನ್ನು 'ಜಂಗಮ ಸಂಸ್ಕೃತಿ' ಎಂದೂ ಸೂಕ್ತವಾಗಿ ಕರೆಯಬಹುದು. 'ಜಂಗಮ' ಎಂದರೆ ವಿಶಾಲಾರ್ಥದಲ್ಲಿ ಸಮಾಜ. ಆದ್ದರಿಂದ, ಶರಣ ಸಂಸ್ಕೃತಿಯೆಂದರೆ ಸಾಮಾಜಿಕ ಸಮಷ್ಟಿ ಸಂಸ್ಕೃತಿ; 'ದಾಸೋಽಹಂ' ಸಂಸ್ಕೃತಿ 'ಅಹಂ' ಪ್ರಧಾನವಾದ ಸ್ವಾರ್ಥ ಸಂಸ್ಕೃತಿಯಲ್ಲ. ಶರಣರು ಲಿಂಗಕ್ಕಿಂತ ಜಂಗಮಕ್ಕೆ ಮಿಗಿಲಾದ ಪ್ರಾಶಸ್ತ್ಯ ಕೊಟ್ಟರೆಂಬುದು ಬಹಳ ಗಮನಾರ್ಹವಾದ ಸಂಗತಿ. ಇನ್ನೊಂದು ದಿಕ್ಕಿನಿಂದ ನೋಡಿದರೆ, ಶರಣರು ಪರದ ಪರಿವೆಯಲ್ಲಿ ಇಹವನ್ನು ಮರೆಯಲಿಲ್ಲ; ಆಧ್ಯಾತ್ಮ ಸಾಧನೆಯ ಭರದಲ್ಲಿ ಸಹಜೀವಿಗಳನ್ನು ಮರೆಯಲಿಲ್ಲ.

ಶರಣ ಸಂಸ್ಕೃತಿಯ ಅತ್ಯುತ್ತಮ ಪ್ರತಿನಿಧಿಯೂ ತವನಿಧಿಯೂ ಆದ ಬಸವಣ್ಣನವರು ದೇವಾಲಯ ಸಂಸ್ಕೃತಿಯನ್ನು ನಿರಾಕರಿಸಿ ಆಡುವ ಮಾತು ಇಡೀ ಜಗತ್ತಿನ ವಿಚಾರ ಭಂಡಾರಕ್ಕೊಂದು ಮೌಲಿಕವಾದ ಕೊಡುಗೆ; ಶರಣರ ಕೊಡುಗೆ ಮಾತ್ರವಲ್ಲ, ಕನ್ನಡದ್ದು ಕೂಡ ! 'ಸ್ಥಾವರ' ಎಂದರೆ ಜಡವಾದದ್ದು, ಸ್ಥಗಿತವಾದದ್ದು; 'ಜಂಗಮ' ಎಂದರೆ ಚಲನಶೀಲವೂ ಚೈತನ್ಯಾತ್ಮಕವೂ ಆಗಿದೆ. ನಿರಂತರವಾದ ಬೆಳವಣಿಗೆಯನ್ನು ಸೂಚಿಸುವಂಥದು. 'ಸ್ಥಾವರ'ದಲ್ಲಿ ಕೊಳೆತು ನಾರುವ ನೀರಿನ ಕೊಳದ ಪ್ರಸಕ್ತಿಯಿದ್ದರೆ, ಜಂಗಮದಲ್ಲಿ ಹರಿಯುವ ಹೊಳೆಯ ಪ್ರಸಕ್ತಿಯಿದೆ. ಶರಣ ಸಂಸ್ಕೃತಿ ಜೀವನದಿಯೂ ಹೌದು, ರತ್ನಾಕರವೂ ಹೌದು !

ಶರಣಧರ್ಮ ನಾಸ್ತಿಕ ಧರ್ಮವಲ್ಲದಿದ್ದರೂ ದೈವಕೇಂದ್ರಿತವಾದುದಲ್ಲ, ಮಾನವ ಕೇಂದ್ರಿತವಾದುದು ಎಂಬುದನ್ನು ಮರೆಯಬಾರದು. (ವೈದಿಕ ಧರ್ಮ ಮುಖ್ಯವಾಗಿ ದೈವಕೇಂದ್ರಿತವಾದುದರಿಂದಲೇ ಅದರಲ್ಲಿ ಅನೇಕ ಅನರ್ಥಗಳಿಗೆ ಅವಕಾಶ !) ಅದು ಶುದ್ಧವಾಗಿ ಮಾನವೀಯ ಧರ್ಮ; ಮಾನವಧರ್ಮ. ಜೀವಪರತೆ, ಜೀವನಪರತೆ, ಜೀವಕಾರುಣ್ಯ ಆದರ ಜೀವಗುಣಗಳು : "ದಯವೇ ಧರ್ಮದ ಮೂಲವಯ್ಯ!" ಸಕಲ ಜೀವಾತ್ಮರಿಗೆ, ಜೀವಾವಳಿಗೆ "ವಿಪ್ರ ಮೊದಲಾಗಿ ಅಂತ್ಯಜ ಕಡೆಯಾಗಿ" ಎಲ್ಲರಿಗೂ ಲೇಸನ್ನೆ ಬಯಸುವ ಶರಣಧರ್ಮ ಸರ್ವೋದಯ, ಅಂತ್ಯೋದಯಗಳನ್ನು ಅಂತಿಮ ಧ್ಯೇಯವಾಗಿಟ್ಟುಕೊಂಡದ್ದು. ಸುಲಿಗೆ, ಶೋಷಣೆ, ಹಿಂಸೆಗಳಿಗೆ ಅದರಲ್ಲಿ ಆಸ್ಪದವಿಲ್ಲ; ಸಮಾನತೆ, ಸಮದರ್ಶನ ಅದರ ಭದ್ರ ಬುನಾದಿ.

ಶರಣರು ಎಲ್ಲವನ್ನೂ ಆಧ್ಯಾತ್ಮೀಕರಿಸಿದರು (ಬಸವಾದಿಗಳಲ್ಲಿ ಎಷ್ಟೇ ಪ್ರಖರ ಸಾಮಾಜಿಕ ಪ್ರಜ್ಞೆಯಿದ್ದರೂ ಮೂಲತಃ ಅವರು ಭಕ್ತರೆಂಬುದನ್ನು ನೆನಪಿಡಬೇಕು); ಆದರೆ ಏನೊಂದನ್ನೂ ಅಮಾನವೀಯಗೊಳಿಸಲಿಲ್ಲ. ಅವರು ಮಾನವೀಯ ದೌರ್ಬಲ್ಯಗಳನ್ನು ಸಹಾನುಭೂತಿಪೂರ್ವಕವಾಗಿ ಒಪ್ಪುತ್ತಾರೆ; ಆದರೆ ಅವುಗಳನ್ನು ಗೆಲ್ಲಬೇಕೆಂದು ಒತ್ತಿ ಹೇಳುತ್ತಾರೆ : "ಒಡಲುಗೊಂಡವ ಹಸಿವ, ಒಡಲುಗೊಂಡವ ಹುಸಿವ; ನೀನೆನ್ನಂತೆ ಒಡಲುಗೊಂಡು ನೋಡು ...!" ಎಂಬ ದೇವರ ದಾಸಿಮಯ್ಯನ ಉಕ್ತಿ ಗಮನಾರ್ಹವಾದುದು. "ಒಲಿವೆನೆಂಬುದು ಕಾಯಗುಣ" ಎಂದು ಬಸವಣ್ಣನವರೂ ಉದ್ಗರಿಸುತ್ತಾರೆ. ಕ್ಷಮೆಯೂ ಸಂಸ್ಕೃತಿಯ ಒಂದು ಕುರುಹು : "ತಂದೆ ಮಕ್ಕಳಿಗೆ ಮುನಿವಲ್ಲಿ ತಪ್ಪಿಂಗೆ ಮುನಿವನಲ್ಲದೆ ಪ್ರಾಣಕ್ಕೆ ಮುನಿಯ!" ಎಂಬ ಬಸವೋಕ್ತಿಯೂ ಸ್ಮರಣೀಯ. "ಇಂದ್ರಿಯನಿಗ್ರಹವ ಮಾಡಿದರೆ ಹೊಂದುವುವು ದೋಷಂಗಳು" ಎಂದು ಜನಸಾಮಾನ್ಯರನ್ನು ದೃಷ್ಟಿಯಲ್ಲಿರಿಸಿಕೊಂಡು, ಮನೋವಿಜ್ಞಾನದ ಹಿನ್ನೆಲೆಯಲ್ಲಿ ಹೇಳುತ್ತಾರೆ ಬಸವಣ್ಣ. ಇಂದ್ರಿಯಗಳ ಅಸಹಜವಾದ, ಬಲಾತ್ಕಾರಪೂರ್ವಕವಾದ ದಮನಕ್ಕೆ ಅವರು ಕರೆ ಕೊಡುವುದಿಲ್ಲ.

ಭಗವಂತನ ಬಗೆಗೆ ಆತ್ಮೀಯತೆ, ಸಹಜೀವಿಗಳ ಮತ್ತು ಇಹಜೀವಿಗಳ ಬಗೆಗೆ ಆತ್ಮೀಯತೆ, ಪರಕೀಯತೆಯ ನಿರಸನ ಶರಣ ಸಂಸ್ಕೃತಿಯಲ್ಲಿ ಎದ್ದುಕಾಣುತ್ತದೆ : "ಇವನಾರವ ಇವನಾರವ ಎನಿಸದಿರಯ್ಯಾ!" ಎಂಬ ಬಸವಣ್ಣನವರ ಮೊರೆಯನ್ನು ಅಗತ್ಯವಾಗಿ ಲಕ್ಷಿಸಬೇಕು.

ಸಮಾನತೆಯೆಂತೂ ಅಂತೆ ಸೋದರತೆ ಶರಣರ 'ಅಕ್ಕ' ಎಂಬ ಪರಸ್ಪರ ಸಂಬೋಧನೆಯಲ್ಲಿ ನಿದರ್ಶಿತವಾಗಿದೆ : (ಅಕ್ಕಮಹಾದೇವಿ, ಮುಕ್ತಾಯಕ್ಕ, ಬಸವಣ್ಣ, ಚೆನ್ನಬಸವಣ್ಣ, ಅಜಗಣ್ಣ ಇತ್ಯಾದಿ.) ದೇವಮಾನವ ಸಂಬಂಧಗಳಿಗಿಂತ ಮಾನವ-ಮಾನವ ಸಂಬಂಧಗಳು ಶರಣರಿಗೆ ಹೆಚ್ಚು ಮುಖ್ಯವಾಗಿದ್ದುವು; ಅವುಗಳಲ್ಲಿ ಸೌಹಾರ್ದ, ಸೌಮನಸ್ಯಗಳು ಸ್ವಭಾವೇಶಗೊಂಡಿದ್ದುವು.

ಆಡುವ ಮಾತು ಹೇಗಿರಬೇಕು ಎಂಬುದು ಸಂಸ್ಕೃತಿಯಲ್ಲಿ ಒಂದು ಪ್ರಮುಖ ವಿಷಯವಾಗುತ್ತದೆ. ನುಡಿಯಲ್ಲಿ ವಿನಯ, ಪ್ರೀತಿ, ಸೌಜನ್ಯವಿರಬೇಕು; ಅದು ಹೃದಯದ ಪರಿಪಕ್ವತೆಯ ದ್ಯೋತಕವಾಗುತ್ತದೆ. ಬಸವಣ್ಣನವರ ಅನೇಕ ವಚನಗಳು ವಾಕ್ ಸಂಸ್ಕೃತಿಯನ್ನು ತುಂಬ ಗಮನಾರ್ಹವಾಗಿ ಪ್ರತಿಪಾದಿಸುತ್ತವೆ.

*"ಏನ ಬಂದಿರಿ; ಹದುಳವಿದ್ದಿರೆ?" ಎಂದರೆ*
*ನಿಮ್ಮೈಸಿರಿ ಹಾರಿಹೋಹುದೆ?*
*"ಕುಳ್ಳಿರಿ" ಎಂದರೆ ನೆಲ ಕುಳಿಹೋಹುದೆ?....*

*ಮೃದುವಚನವೇ ಸಕಲ ಜಪಂಗಳಯ್ಯ,*
*ಮೃದುವಚನವೇ ಸಕಲ ತಪಂಗಳಯ್ಯ !*
*ಸದುವಿನಯವೇ ಸದಾಶಿವನೊಲುಮೆಯಯ್ಯ !*

"ಅಯ್ಯಾ" ಎಂದಡೆ ಸ್ವರ್ಗ, "ಎಲವೋ" ಎಂದರೆ ನರಕ ...

ಇಲ್ಲಿ ಜಪತಪ, ಸ್ವರ್ಗ, ನರಕಗಳ ಪುನರ್ಮೌಲ್ಯಮಾಪನವಿದೆ; ಹಾಗೆಯೇ 'ವಾಙ್ಮಯತಪ' ಬಸವಣ್ಣನವರಿಗೆ ಉಕ್ತವಾಗಿದೆ.

ಮಾತಿನಲ್ಲಿ ಮಾರ್ದವವಿರಬೇಕು, ಮಾಧುರ್ಯವಿರಬೇಕು, ನಿಜ; ಆದರೆ ಅಷ್ಟರಲ್ಲೆ ಎಲ್ಲ ಪರ್ಯಾವಸಾನಗೊಂಡರೆ ಏನು ಪ್ರಯೋಜನ? ಶರಣರದು ಮಾನಸಕೃಷಿ ಮಾತ್ರವಲ್ಲ, ಬಹಿರಂಗ ಕೃತಿ ಕೂಡ ! ಅವರು ಆಲೋಚಿಸಿದ್ದನ್ನು, ಆಡಿದ್ದನ್ನು ಮಾಡಿತೋರಿಸಿದರು ಎಂಬುದು ಅವರ ಹಿರಿತನ.

ಕಾರ್ಡಿನಲ್ ನ್ಯೂಮನ್ ಎಂಬಾತ Gentleman (ಸಭ್ಯ, ಸಂಭಾವಿತ, ಸುಸಂಸ್ಕೃತ)ನ ಲಕ್ಷಣವನ್ನು ಹೀಗೆ ತಿಳಿಸುತ್ತಾನೆ : "One who never inflicts pain on other" (ಇತರರನ್ನು ನೋಯಿಸದವರು). ಇದಕ್ಕೇ ಸಂವಾದಿಯಾಗಿದೆ, ಸಿದ್ಧರಾಮನ ಈ ಉಕ್ತಿ : "ಮನವ ನೋಯಿಸದವನೆ ಪರಮಪಾವನ, ನೋಡಾ"! ಮಾತಿನಿಂದಾಗಲಿ, ಕೃತಿಯಿಂದಾಗಲಿ ಅನ್ಯರಿಗೆ ನೋವುಂಟು ಮಾಡದಿರುವುದೇ ಸಂಸ್ಕೃತಿಯ ಹೆಗ್ಗುರುತು. ಅಗ್ಗಳಿಕೆ, ಶರಣರು ಅಂಥವರು. (ಕೆಲವೊಮ್ಮೆ ಅವರು ಅಪ್ರಿಯವಾಗಿ ಕಟು ನುಡಿಯುವುದುಂಟು; ಮನಸ್ಸನ್ನು ನೋಯಿಸುವುದಕ್ಕಾಗಿಯಲ್ಲ, ಹಿತವೆಸಗುವುದಕ್ಕಾಗಿ.)

"ಸತ್ಯವ ನುಡಿವುದೇ ದೇವಲೋಕ, ಮಿಥ್ಯವ ನುಡಿವುದೇ ಮರ್ತ್ಯಲೋಕ", "ಆಚಾರವೇ ಸ್ವರ್ಗ, ಅನಾಚಾರವೇ ನರಕ" ಮುಂತಾದ ಹೇಳಿಕೆಗಳನ್ನು ಪುನರ್ಮೌಲ್ಯಮಾಪನ ದೃಷ್ಟಿಯಿಂದ ಪರಿಭಾವಿಸಬೇಕು. ಅವು ವೈಚಾರಿಕ ಮನೋಧರ್ಮಕ್ಕೂ ಉಜ್ವಲ ಸಾಕ್ಷಿ. ಶರಣರು ಇಹವನ್ನು ತಿರಸ್ಕರಿಸಿದವರಲ್ಲ; ಇಹಪರಗಳನ್ನು ಬೆಸೆದವರು; ಅಮರ್ತ್ಯವನ್ನು ಮರ್ತ್ಯಕ್ಕೆ ವರ್ಗಾಯಿಸಿದವರು.

"ಶಿವಲೋಕ" ಭುವಿಗೆ ಅವರು ಉತ್ತೇಜನವೀಯದೆ "ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ, ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯ!" ಎಂಬ ವಿವೇಕದ ನಿಲುವನ್ನು ಪ್ರಕಟಿಸಿದರು. ಇಹದ ಪ್ರೀತಿ, ಜೀವನ ಪ್ರೀತಿ, ಇಹ-ಪರ ಸಮನ್ವಯ ಶರಣರ ವಿಶಿಷ್ಟತೆ.

ಶರಣರು ಇಂದ್ರಿಯಲೋಲುಪತೆಗೆ ಹಾಸಿಗೆ ಹಾಸದಿದ್ದರೂ, ವೈರಾಗ್ಯವನ್ನು ವೈಭವೀಕರಿಸಲಿಲ್ಲ. ಅವರ ಪಾಲಿಗೆ ದೇಹ ಹೇಯವಲ್ಲ; ಅದೇ ದೇವಮಂದಿರ. ಧರ್ಮಬದ್ಧ ಕಾಮವನ್ನು ಅವರು ಪುರಸ್ಕರಿಸಿದರು. ನಿದರ್ಶನಕ್ಕೆ, **"ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ !"** ಎಂಬ ಜೇಡರ ದಾಸಿಮಯ್ಯನ ಧೋರಣೆ ಮನನಯೋಗ್ಯ. ಸಂಸಾರದಲ್ಲಿದ್ದುಕೊಂಡೂ, ಪ್ರಪಂಚದಲ್ಲಿದ್ದುಕೊಂಡೂ ಪರಮಾರ್ಥವನ್ನು ಸಾಧಿಸಬಹುದು ಎಂಬುದು ಶರಣರ ನಿಲುವು (ಅಪವಾದಗಳಿರಬಹುದು).

ಸ್ತ್ರೀ-ಪುರುಷ ಸಮಾನತೆಯನ್ನು ಎತ್ತಿ ಹಿಡಿದು, ಸ್ತ್ರೀಯರಿಗೆ ಪರಮಗೌರವ ಸಲ್ಲಿಸಿದ್ದು ಶರಣರ ಹಿರಿಮೆ. ಈ ದಿಶೆಯಲ್ಲಿ "ಹೆಣ್ಣು ಮಾಯೆಯಲ್ಲ ..... ಮನದ ಮುಂದಣ ಆಸೆಯೇ ಮಾಯೆ!" ಎಂಬ ಅಲ್ಲಮಪ್ರಭುವಿನ ಉಕ್ತಿ ತುಂಬ ಬೆಲೆಯುಳ್ಳದ್ದು; ಅಪೂರ್ವವಾದುದು.

ಶರಣರ ವೈಚಾರಿಕತೆಯಂತೆ ಶರಣೆಯರದೂ ಅಚ್ಚರಿ ತರುತ್ತದೆ. ಉದಾಹರಣೆಗೆ, ಆಯ್ದಕ್ಕಿ ಲಕ್ಕಮ್ಮನ ಈ ಮಾತು ಅತ್ಯಂತ ಗ್ರಾಹ್ಯವಾದದ್ದು. **"ಆಸೆ ಎಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೇ ಅಯ್ಯಾ?"** ಆಸೆ ರಾಜಕೀಯ 'ಮೌಲ್ಯ !' ಅತ್ಯಾಶೆಗೆ, ದುರಾಶೆಗೆ ವಿರುದ್ಧವಾದದ್ದು ಶರಣ ಸಂಸ್ಕೃತಿ. ಶರಣರು 'ನಿರಾಶಾಮಹಾತ್ಮ'ರು !

ಕಾಯಕತತ್ತ್ವಕ್ಕೆ, ಕಾಯಕ ಸಂಸ್ಕೃತಿಗೆ ಶರಣರು ಕೊಟ್ಟ ಮಹತ್ವ ಅಸಾಮಾನ್ಯವಾದುದು. ಈ ಯುಗಕ್ಕೂ ಅದೊಂದು ಘನವಾದ, ಪ್ರಸ್ತುತವಾದ ಕೊಡುಗೆ. ಶರಣರು ಕಟ್ಟಬಯಸಿದ ನವಸಮಾಜದ ಅಡಿಗಲ್ಲೇ ಕಾಯಕ; ಅವರ ಪಾಲಿಗೆ ಅದು ಲೌಕಿಕ ಮೌಲ್ಯವೂ ಹೌದು, ಆಧ್ಯಾತ್ಮಿಕ ಮೌಲ್ಯವೂ ಹೌದು. ಆದರೆ ಕಾಯಕ "ಸತ್ಯಶುದ್ಧ ಕಾಯಕ"ವಾಗಿರಬೇಕು ಎಂದು ಹೇಳುವುದನ್ನೂ ಮರೆಯಲಿಲ್ಲ ವಚನಕಾರರು. **"ಲಿಂಗವಾದರೂ ಕಾಯಕದೊಳಗು !"** ಎಂಬ ಆಯ್ದಕ್ಕಿ ಮಾರಯ್ಯನ ಮಾತು ತುಂಬ ಹುರುಳುಳ್ಳದ್ದು. ನುಲಿಯ ಚಂದಯ್ಯನಂತೂ ಲಿಂಗದ ಕೈಯಲ್ಲೇ ಕಾಯಕ ಮಾಡಿಸಿದ ಮಹಾನುಭಾವ !

ಇಂದಿನ ಹಲವು ಸಮಸ್ಯೆಗಳಿಗೆ ಮದ್ದಾಗಬಲ್ಲ ಆರ್ಥಿಕ ತತ್ತ್ವ ಕೂಡ ಹೌದು, ಕಾಯಕ. ಅದರ ಇನ್ನೊಂದು ಮುಖವೇ ದಾಸೋಹ; ಅದರಲ್ಲೂ ಜಂಗಮ ದಾಸೋಹ. ಸಮಾನತೆಗೆ, ಜಾತಿವಿನಾಶಕ್ಕೆ ಸಹ ನೆರವಾಗುತ್ತದೆ, ಶರಣರ ಕಾಯಕ ಪರಿಕಲ್ಪನೆ.

ಜಾತಿ ವಿನಾಶಕ್ಕೆ, ಅಸ್ಪೃಶ್ಯತೆಯ ನಿವಾರಣೆಗೆ ಶರಣರು ಶ್ರಮಿಸಿದರು. ಅವರಿಗೆ ಮುಖ್ಯವಾಗಿದ್ದುದು ಹುಟ್ಟಿನಿಂದ ಬಂದ ಜಾತಿಯಲ್ಲ; ವ್ಯಕ್ತಿ ಪಾಲಿಸುವ ನೀತಿ. ಅವರ ದೃಷ್ಟಿಯಲ್ಲಿ ಜಾತಿ ಎರಡೇ : ಭಕ್ತ ಮತ್ತು ಭವಿ. (ಗಂಡು, ಹೆಣ್ಣು ಎಂಬ ಭೇದವನ್ನೂ ಅವರು ಮನ್ನಿಸುವುದಿಲ್ಲ, ಆತ್ಮಕ್ಕೆ ಲಿಂಗಭೇದವಿಲ್ಲವಾದ್ದರಿಂದ !) "ಕೊಲುವವನೇ ಮಾದಿಗ, ಹೊಲಸ ತಿಂಬುವವನೇ ಹೊಲೆಯ !"? ಎಂಬುದು ಬಸವಸೂಕ್ತಿ. "ಮಾದಾರ ಚೆನ್ನಯ್ಯನ ಮನೆಯ ಮಗ ನಾನು !" ಎನ್ನುವಷ್ಟು ದೂರ ಹೋಗಿ, ಅಸ್ಪೃಶ್ಯರೆನಿಸಿಕೊಂಡವರೊಡನೆ ತಮ್ಮನ್ನು ಗುರುತಿಸಿಕೊಳ್ಳುತ್ತಾರೆ, ಬಸವಣ್ಣ.

ಅವರ ಈ ಸಪ್ತಸೂತ್ರ ಸಂಹಿತೆ ಗಮನಾರ್ಹವಾದದ್ದು :

***ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ,***
***ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ***
***ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ –***
***ಇದೇ ಅಂತರಂಗಶುದ್ಧಿ ಇದೇ ಬಹಿರಂಗಶುದ್ಧಿ .....***

**"ಅನ್ಯರಿಗೆ ಅಸಹ್ಯಪಡಬೇಡ"** ಎನ್ನುವಲ್ಲಿ ಸಮಾನತಾತತ್ತ್ವ ಚೆನ್ನಾಗಿ ಉಕ್ತವಾಗಿದೆ. "ಇದೇ ಬಹಿರಂಗ ಶುದ್ಧಿ" ಎಂಬ ಮಾತು ಯಾಂತ್ರಿಕವಾದ ಹೊರಗಿನ ಮಡಿವಂತಿಕೆಯನ್ನು ನಿರಾಕರಿಸುತ್ತದೆ.

**"ಕಾಗೆಯೊಂದಗುಳ ಕಂಡಡೆ ಕರೆಯದೇ ತನ್ನ ಬಳಗವನು? ..."** ಎಂಬ ವಚನದಲ್ಲಿ ಬಸವಣ್ಣನವರು ಸಹಕಾರ ಸಂಸ್ಕೃತಿಯನ್ನು ಅರುಹಿದ್ದಾರೆ.

ಸಮಾಜದಲ್ಲಿ, ಜಗತ್ತಿನಲ್ಲಿ ಹೇಗೆ ಬದುಕಬೇಕು? ಇದೊಂದು ದೊಡ್ಡ ಪ್ರಶ್ನೆ. "ಕೆಂಡದ ಮಳೆ ಕರೆವಲ್ಲಿ ಉದಕವಾಗಿರಬೇಕು ..." ಎಂದು ಅನನ್ಯವಾಗಿ ಉತ್ತರಿಸುತ್ತಾನೆ ಅಲ್ಲಮ. (ಆ ವಚನದಲ್ಲಿ ಲೌಕಿಕ, ಲೋಕೋತ್ತರ ಎರಡೂ ಸ್ತರಗಳ ಸಂದೇಶವಿದೆ) "ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಂಗಳಿಗಂಜಿದೊಡೆಂತಯ್ಯ?" ಎಂಬುದು ಅಕ್ಕನ ಪ್ರಶ್ನರೂಪಕ ಸಾಂತ್ವನ, ಭರವಸೆ.

ಮನುಷ್ಯ ಮೃಗೀಯತೆಯಿಂದ ಪಾರಾಗಿ, ದೇವತ್ವದತ್ತ ಸಾಗಬೇಕು. ಬದುಕು ಪ್ರಕೃತಿಯಿಂದ ಸಂಸ್ಕೃತಿಗೆ ಯಾತ್ರೆಯಾಗಬೇಕು; ಸುಕೃತಿಗೆ ಕೂಡ. ಎಂತೂ ಅದು ವಿಕೃತಿಯಾಗಕೂಡದು ! ಈ ದೃಷ್ಟಿಯಿಂದ ಶರಣ ಸಂಸ್ಕೃತಿ ಮನನೀಯ, ಉಪಾದೇಯವಾದ್ದು; ಶ್ರೇಯಸ್ಕರವಾದದ್ದು.

*





# ಕೆಡೆ ನುಡಿಯದಿದ್ದರೆ ಏನು ಕೊಡನಯ್ಯಾ ಲಿಂಗವು

– ಎಂ. ಮಾಧವಪ್ಪ
ರಾಜ್ಯಶಾಸ್ತ್ರ ಉಪನ್ಯಾಸಕರು,
ಸರ್ಕಾರಿ ಪದವಿಪೂರ್ವ ಕಾಲೇಜು, ಹೊನ್ನಾಳಿ,
ದಾವಣಗೆರೆ ಜಿಲ್ಲೆ.

*ಕಡೆ ನುಡಿಯದ ಕಡೆ ನುಡಿಯದೆ*
*ಅಕ್ಷರ ಪ್ರತಿಪಾದಿಸದಿದ್ದರೆ*
*ಏನು ಮಾಡನಯ್ಯ ಲಿಂಗವು*
*ಏನು ಕೊಡನಯ್ಯ ತಾನು*

ಎಂದರು ಮಾನವತಾವಾದಿ ಬಸವಣ್ಣನವರು. ಆದರೆ ಇದನ್ನು ಅರ್ಥಮಾಡಿಕೊಂಡು ಜೀವನದಲ್ಲಿ ಅಳವಡಿಸುವವರೆಷ್ಟು ಮಂದಿ? ಏಕೆಂದರೆ ಕೆಡೆನುಡಿಯದೆ ಉಳಿಯಲು ನಮಗೆ ಸಾಧ್ಯವಾಗುತ್ತಾನೇ ಇಲ್ಲ. ಕಾರಣ ನಮ್ಮಲ್ಲಿ ಹುದುಗಿರುವ ಅಸಹನಾಭಾವ ನಮಗೆ ಅಡ್ಡನಿಲ್ಲುತ್ತದೆ. ಹೀಗಾಗಿಯೇ 'ಈ ಲೋಕದಲ್ಲಿ ಸಾಧಿಸಲು ಅತ್ಯಂತ ಕಠಿಣವಾದವುಗಳೆಂದರೆ ನಿರ್ಮತ್ಸರತೆ ಮತ್ತು ದೋಷಿಗೆ ಕ್ಷಮೆ' ಎಂಬ ಒಂದು ನುಡಿ ಇದೆ. ಇವೆರಡೂ ಒಂದಕ್ಕೊಂದು ಪೂರಕವಾಗಿರುವಂತಹುಗಳು. ನಿರ್ಮಾತ್ಸರತೆಯಿಂದ ಕ್ಷಮಾಭಾವ, ಕ್ಷಮಾಭಾವದಿಂದ ನಿರ್ಮತ್ಸರತೆ. ಆದರೆ ಇದರ ಸಾಧನೆ ಬಲು ಕಠಿಣ. ಏಕೆ? ಮನುಷ್ಯನ ಮನಸ್ಸು ಮತ್ಸರದ ಗೂಡಂತೆ. ತನ್ನ ಹೊರತು ಮತ್ತೊಬ್ಬರ ವಿಷಯದಲ್ಲಿ 'ಸಹನೆ' ಇಲ್ಲದಿರುವಂತಹ ಸ್ವಭಾವ. ಅವನಲ್ಲಿ ಸಹನೆ ಎಂಬ ಶಬ್ದದ ಬಳಕೆ ಇದೆಯೇ ಹೊರತು ಸಹನಾಭಾವ ಅವನಲ್ಲಿ ಬೆಳೆದು ಬಂದಿರುವುದು ಕಡಿಮೆ. ಅವನ ಎಲ್ಲ ವ್ಯವಹಾರದಲ್ಲಿ ಅಸಹನೆಯೇ ಪ್ರಮುಖ ಪಾತ್ರ ವಹಿಸುತ್ತಿರುವುದು ಕಂಡು ಬರುತ್ತದೆ. ಪ್ರಮಾಣದಲ್ಲಿ ಹೆಚ್ಚು ಕಡಿಮೆ ಇದ್ದರು, ಸ್ಥಾನಮಾನವುಳ್ಳ ಪೀಠಾಧೀಶ್ವರಲ್ಲಿಯೂ ರಾಜಮಹಾರಾಜರುಗಳಲ್ಲಿಯೂ, ರಾಜ್ಯಪ್ರತಿಪಾಲನೆಯ ನೊಗ ಹೊತ್ತವರಲ್ಲಿಯೂ ಪಕ್ಷ-ಪಕ್ಷಗಳ ನೇತಾರರಲ್ಲಿಯೂ ಮೇಧಾವಿಗಳೆನಿಸಿಕೊಂಡವರಲ್ಲಿಯೂ, ತಪೋನಿಷ್ಠರಾದ ಋಷಿಮುನಿಗಳಲ್ಲಿಯೂ ಅಡಗಿ ಕುಳಿತು ಪ್ರಕಟವಾಗಲು ಹೊಂಚು ಹಾಕಿ ಕುಳಿತಿರುತ್ತದೆ. ಈ ಅಸಹನೆ ಎಂಬುದು.

ಹೀಗೇಕೆ ಎಂದು ಸ್ವಲ್ಪ ವಾಸ್ತವಿಕವಾಗಿ ನೋಡಿದರೆ ಮನುಜಮಾತ್ರರಲ್ಲಿ ಕಾಣಬರುವ ಒಂದು ಮನೋಭಾವವೆಂದರೆ, ಸ್ವಯಂ ಪ್ರೇರಿತರಾಗಿ ತಾವೇನು ಮಾಡುತ್ತಿದ್ದೇವೆ ಎಂಬುದನ್ನು ಅರಿಯದೆ ತಾವು ಚಿಂತಿಸಿದುದು, ಕಂಡುದು, ಕಲಿತದ್ದು, ಯೋಚಿಸುವುದು ಮಾತ್ರ ವಿಶೇಷವಾಗಿರುವ ಸತ್ಯವೆಂದೂ ಬಹು ಮಹತ್ವವಾದುದೂ ಮೌಲಿಕವಾದುದೂ ಎಂದೂ, ತಾವು ಕಂಡುಕೊಂಡಿದುದು ಮಾತ್ರ ಅರಿವು, ಜ್ಞಾನವೆಂದೂ ಸ್ಥಾಪಿಸಲು ಮುಂದಾಗುವುದು. ಇಷ್ಟೇ ಆಗಿದ್ದರೆ ಪರವಾಗಿರಲಿಲ್ಲ. ಇದರ ಜೊತೆಗೆ ತನ್ನ ಕಾಲಬುಡದಲ್ಲಿ ಕುಂಬಳಕಾಯಿಯಷ್ಟು ದೋಷವಿದ್ದರೂ ಅದನ್ನು ಲಕ್ಷಿಸುವ ವಿಶಾಲ ದೃಷ್ಟಿಯಿಲ್ಲದಿದ್ದರೂ ಇನ್ನೊಬ್ಬರ ಕಾಲ್ಲ ಬುಡದಲ್ಲಿದ್ದ ಅತಿ ಚಿಕ್ಕದಾದ ಎಣಿಕೆಗೂ ಸಲ್ಲದ ಸಾಸಿವೆ ಕಾಳನ್ನು ಬೆಟ್ಟಿಟ್ಟು ತೋರಿಸುವ ಸೂಕ್ಷ್ಮಗ್ರಾಹಿತ್ವ ತನ್ನಲ್ಲಿದೆ ಎಂಬ ದುರಭಿಮಾನ. ಛಿದ್ರಾನ್ವೇಷಣೆಯೊ ಜೀವನದ ಲಕ್ಷ್ಯ ಎಂಬುದನ್ನೇ ಧ್ಯೇಯವಾಗಿಸಿಕೊಂಡಿರುತ್ತಾರೆ. ಇದರಿಂದ ಒಂದಲ್ಲ ಒಂದು ಕಾರಣವನ್ನೆತ್ತಿಕೊಂಡು ಪರರನ್ನು ಅವಹೇಳನ ಮಾಡುವ ನುಡಿ ಮಳೆಯನ್ನೇ ಸುರಿಸುವುದೇ ಜಾಯಮಾನವಾಗಿ ಬೆಳೆದು ಬಂದಿರುವ ಪಾಂಡಿತ್ಯವನ್ನು ಸ್ಥಾಪಿಸುವುದು. ಅಹಂಕಾರ ಮೂಲವಾಗಿರುವ ಈ ವರ್ತನೆ ಅಸಹನೆಗೆ ಇಂಬು ಕೊಡುತ್ತದೆ. ಆದರೆ

*ಪರನಿಂದಾಸು ಪಾಂಡಿತ್ಯಂ ಸ್ವೇಷು ಕಾರ್ಯೇಷ್ವನುದ್ಯಮಃ*
*ಪ್ರದ್ವೇಷಶ್ಚ ಗುಣಜ್ಞೇಷು ಪಂಥಾನೋ ಹ್ಯಾಪದಾ ॥*

ಪರರನ್ನು ನಿಂದಿಸುವಲ್ಲಿ ಪಾಂಡಿತ್ಯ, ಸ್ವಕಾರ್ಯದಲ್ಲಿ ಪರಿಶ್ರಮವಿಲ್ಲದಿರುವುದು (ಅನಾಸಕ್ತಿ, ಅಸಡ್ಡೆ) ಹಾಗೂ ಗುಣವಂತರ ಬಗ್ಗೆ ದ್ವೇಷ. ಈ ಮೂರು ಆಪತ್ತಿಗೆ ಮೂರು ಕಾರಣಗಳು ಎಂದು ಹೇಳುತ್ತದೆ ಈ ಸೂಕ್ತಿ. ಇದರಿಂದ ಅದನ್ನು ಯಾರಾದರೂ ಅಲ್ಲಗಳೆದರೆ, ಅದು ಹಾಗಲ್ಲ, ಹೀಗೆ ಎಂದು ಸರಿಪಡಿಸಿ ಹೇಳಿದರೆಂದಾದರೆ ಅವರಿಗೆ ಅದು ಸಹನೆಯಾಗದಿರುವುದು ಸಾಮಾನ್ಯವಾಗಿ ಗೋಚರವಾಗುವ ವಾಸ್ತವಿಕ ಸಂಗತಿಯಾಗಿದೆ. ತಾವೇ ಮಹಾವಿಚಾರವಂತರು ಎಂದು ತಿಳಿದು ಅಥವಾ ಭಾವಿಸಿ, ತಮ್ಮಂತೆಯೇ ಪರರಿಗೂ ವಿಚಾರ ಮಾಡುವ ಶಕ್ತಿಯಿದೆ. ಅವರೂ ಬುದ್ಧಿಯುಳ್ಳವರು ಎಂಬುದರತ್ತ ಗಮನ ಹರಿಸದಿರುವುದೂ ಇಲ್ಲಿ ಎದ್ದು ಕಾಣುತ್ತದೆ. ವಿಚಾರ ಮಾಡುವ ಸ್ವಭಾವ ಇಲ್ಲದಿರುವವರು ಯಾರು ಇಲ್ಲ. ಮಾನವರಾಗಿ ಹುಟ್ಟಿದವರೆಲ್ಲ ವಿಚಾರವಂತರೇ ಆಗಿರುತ್ತಾರೆ. ವಿಚಾರವಂತಿಕೆ ಎಂಬುದು ಕೆಲವರದ್ದೇ ಮಾತ್ರ ಸೊತ್ತಲ್ಲ ಎಂಬುದನ್ನು ಮನಗಾಣದೆ, ಸತ್ಯವೇನು ಎಂಬುದನ್ನು ಕಾಣುವುದಕ್ಕಿಂತ ಇನ್ನೊಬ್ಬರನ್ನು

ಕುಬ್ಜರಾಗಿಸಿ ತಮ್ಮ ಪ್ರತಿಷ್ಠೆ ಬೆಳೆಸುವುದು, ಅದನ್ನೇ ಸಾಕಾರಗೊಳಿಸುವುದಾಗಿದೆ. ಹೀಗಾಗಲು ಕಾರಣ ಪರರ ಚಿಂತನವನ್ನು ಸ್ವೀಕರಿಸುವ ಸಹನೆ ತೋರದೆ ಇರುವ ಸ್ವಭಾವವಾಗಿದೆ; ಅಂದರೆ ಅಸಹನೆ. ಇದರಿಂದಾಗಿ ಅವಹೇಳನ. ಇದಕ್ಕೆ ಮೂಲಬೇರು ತಾನೇ ತಾನು ಎಂಬ ಅಹಂ ಈ ಅಹಮಿಕೆಯಿಂದಾಗಿ :

*"ಆನೆಯನೇರಿಕೊಂಡು ಹೋದಿರೆ ನೀವು*
*ಕುದುರೆಯನೇರಿಕೊಂಡು ಹೋದಿರೆ ನೀವು*
*ಕುಂಕುಮ ಕಸ್ತೂರಿ ಪೂಸಿಕೊಂಡು ಹೋದಿರೆ ಅಣ್ಣಾ*
*ಸತ್ಯದ ನಿಲುವರಿಯದೆ ಹೋದಿರಲ್ಲ*
*ಸದ್ಗುಣವೆಂಬ ಫಲವಬಿತ್ತಿ ಬೆಳೆಯದೆ ಹೋದಿರಲ್ಲ*
*ಅಹಂಕಾರವೆಂಬ ಮದಗಜವೇರಿ ವಿಧಿಗೆ ಗುರಿಯಾಗಿ ಹೋದಿರಲ್ಲ"*

ಎಂಬಂತೆ ಮದಗಜವೇರಿ ತಾನೇ ಎತ್ತರದಲ್ಲಿರುವವನು, ಇನ್ನೊಬ್ಬರು ಆ ಎತ್ತರಕ್ಕೇರುವಂತಿಲ್ಲ, ಏರಲು ಶಕ್ತರೂ ಅಲ್ಲ ಎಂಬ ದುರಭಿಮಾನ ಎತ್ತರಕ್ಕೇರುವವನ ಕಂಡಾಕ್ಷಣ ಅಸಹನೆ ತಲೆದೋರಿ ಅಮರ್ಷ ಉಕ್ಕಿ ಅವಹೇಳನಾಕಾರಿ ನುಡಿಗಳು ಹೊರಹೊಮ್ಮಲಾರಂಬವಾಗುತ್ತದೆ. ಹೀಗಾಗಿ ಇಂದು ಸಾಮಾನ್ಯವಾಗಿ ಯಾವುದೇ ವೇದಿಕೆಯಿರಲಿ ಪರಸ್ಪರ ದೂಷಣೆ, ನಿಂದೆ, ಅವಹೇಳನ, ಅವಜ್ಞೆ, ತಿರಸ್ಕಾರ, ಅನಾದರದ ನುಡಿಗಳ ಸುರಿಮಳೆಯಾಗುವ ಪರಿಸ್ಥಿತಿ ನಿರ್ಮಾಣವಾಗುವುದನ್ನು ಗಮನಿಸಿದಾಗ 'ಸದ್ಗುಣವೆಂಬ ಫಲವ ಬಿತ್ತಿ ಬೆಳೆಯದೆ ಹೋದಿರಲ್ಲ, ಅಹಂಕಾರವೆಂಬ ಮದಗಜವೇರಿ ಹೋಗುತ್ತಿದ್ದಾರಲ್ಲ ಎಂದು ಮನಸ್ಸು ಅತೀವ ವೇದನೆಯನ್ನು ಅನುಭವಿಸುವಂತಾಗಿದೆ. ಎಲ್ಲವನ್ನು ಸಮದೃಷ್ಟಿಯಿಂದ, ಸಹನಾ ಮನೋಭಾವದಿಂದ ಕಾಣಬೇಕಾದ ಹೃದಯ ವೈಶಾಲ್ಯತೆ ಸಂಕುಚಿತವಾಗುತ್ತ ಎಲ್ಲರನ್ನು ಎಲ್ಲವನ್ನು ಅವಹೇಳನ ಮಾಡುವ ಅಸಹನೆಯಿಂದ ಕಾಣುವ ವಾತಾವರಣ ಬೆಳೆದು ಬರುತ್ತಿರುವುದೇಕೆ ಅಂದರೆ ಪರರ ಗುಣವನ್ನು ಮೆಚ್ಚುವ ವಿಶಾಲ ಮನೋಭಾವನೆ ಕೊರತೆಯೇ ಆಗಿದೆ. 'ಪರಗುಣಾಸಹನಂ ಅಸೂಯಾ' ಎಂದು ಕೋಶಗಳಲ್ಲಿ ತಿಳಿಸಿದಂತೆ ಇದು ಅಸೂಯಾಗುಣ, ಮತ್ಸರ. 'ಮದಮತ್ಸರವುಳ್ಳವರಿಗೆ ಹೃದಯ ಶುದ್ಧವೆಲ್ಲಿಯದೊ' ಎಂದು ಬಸವಣ್ಣವರು ತಿಳಿಸಿದಂತೆ ಮತ್ಸರದ ಸ್ವಭಾವವನ್ನು ವೃದ್ಧಿಸಿಕೊಂಡವರಿಗೆ, ಅವರ ಹೃದಯ ಶುದ್ಧವಿಲ್ಲದಿರುವುದರ ಜೊತೆಗೆ, ಅನ್ಯರಲ್ಲಿರುವ ಹೃದಯ ಶುದ್ಧಿ ಕೂಡ ದೋಷವಾಗಿ ಕಾಣುತ್ತದೆ; ಮಾತ್ರವಲ್ಲ ಅದನ್ನೇ ಕಂಡಕಂಡಲ್ಲಿ ಅಸಹನೆಯಿಂದ ಅವಹೇಳನ ನುಡಿಗಳ ಡಂಗುರ ಸಾರುತ್ತಿರುತ್ತಾರೆ. ಇಂಥವರ ಮನಸ್ಸೆಂಬ ಬುಟ್ಟಿಯಲ್ಲಿರುವುದು ಅಸೂಯೆವೆಂಬ ವಿಷಕಾರುವ ಹಾವು. ಒರಡು ಮಾತುಗಳಿಂದ ಚುಚ್ಚುತ್ತಿರುತ್ತಾರೆ. ಇಲ್ಲ ಸಲ್ಲದ ಸುಳ್ಳು, ಚಾಡಿ ಅಸಂಗತವಾದ ನುಡಿಗಳಿಂದಲೇ ತಮ್ಮ ಬದುಕನ್ನು ಮುಂದುವರಿಸುತ್ತಾರೆ. ಅದೇ ಬಹು ದೊಡ್ಡ ಸಾಧನೆ ಎಂಬುದಾಗಿ ತೋರ್ಪಡಿಸಿಕೊಳ್ಳುತ್ತಾರೆ. ಆದರೆ ಇದನ್ನು ಸುಭಾಷಿತಕಾರ ಏನನ್ನುತ್ತಾನೆ ನೋಡಿ –

*ಪಾರುಷ್ಯ ಮನೃತಂ ಚೈವ ಪೈಶುನ್ಯಂಚಾಪಿ ಸದೃಶಃ*
*ಅಸಂಬದ್ಧ ಪ್ರಲಾಪಶ್ಚ ವಾಙ್ಮಯಂ ಸ್ಯಾಚ್ಚತುರ್ವಿಧಂ –*

ಅಪ್ರಿಯವಾದಂಥ ಒರಡು ಮಾತು, ಸುಳ್ಳು, ಚಾಡಿ, ಅಸಂಗತವಾದ ಕಾಡು ಹರಟೆ ಈ ನಾಲ್ಕೂ ಮಾತಿನಿಂದಾಗುವ ಪಾಪಕೃತ್ಯಗಳು. ಮಗುದೊಂದು ಸುಭಾಷಿತವು –

*ಪರಚ್ಛಿದ್ರೇಷು ಹೃದಯಂ ಪರವಾರ್ತಾ ಸುಚಶ್ರಿತಃ ।*
*ಪರಮರ್ಮಣಿ ವಾಚಂಚ ಖಲಾನಿ ಸೃಜದ್ವಿಧಿಃ ॥*

ಯಾವಾಗಲೂ ಬೇರೆಯವರ ತಪ್ಪನ್ನೇ ಹುಡುಕುವಂಥ ಬುದ್ಧಿ, ಬೇರೆಯವರ ವಿಷಯವನ್ನೇ ಕೇಳಲು ಸದಾ ಯಾವಾಗಲೂ ಕಿವಿ. ಬೇರೆಯವರಿಗೆ ಸಹಿಸಲು ಅಸಾಧ್ಯವಾಗದಂಥ ಚುಚ್ಚುಮಾತು. ಬ್ರಹ್ಮನು ದುರ್ಜನರಿಗಾಗಿಯೇ ಸೃಷ್ಟಿಸಿದ್ದಾನೆ ಎಂದು ತಿಳಿಯಪಡಿಸುತ್ತದೆ. ಯಾವುದರಿಂದ ಪರರಿಗೆ ಒಳಿತಾಗಬಹುದು. ಅದಕ್ಕಾಗಿ ಏನು ಮಾಡಬೇಕು ಎಂಬುದನ್ನು ಚಿಂತಿಸುವುದಕ್ಕಿಂತ ಪರರು ಮಾಡುವ ಒಳಿತೋ ಕೆಡುಕೋ ಯಾವುದೇ ಇರಲಿ ಅದನ್ನು ಅವಹೇಳನ ಮಾಡುವ ಅಸಹನೆ ಬೆಳೆದು ಬಂದಿರುವುದನ್ನು ಇಂದು ನಾವು ಕಾಣುವಂತಾಗಿರುವುದು ದೌರ್ಭಾಗ್ಯವೇ ಸರಿ. ಹೀಗಾಗಲು ಮುಖ್ಯ ಕಾರಣವೆಂದರೆ ಉಳಿದವರ ನಂಬಿಕೆಗಳು ಸತ್ಯವಲ್ಲ ಎಂದು ಭಾವಿಸುವ ವ್ಯಕ್ತಿಗತ ಈ ಸ್ವಭಾವವೇ ಪಕ್ಷ ಪಕ್ಷಗಳಲ್ಲಿ, ಮತ-ಮತಗಳಲ್ಲಿ, ಪಂಥ-ಧರ್ಮಿಗಳಲ್ಲಿಯೂ ರೂಪುತಾಳಿ ತಮ್ಮ ಪ್ರತಿಷ್ಠೆಯನ್ನು ಎತ್ತಿ ನಿಲ್ಲಿಸಲು ಪರಸ್ಪರ ದೂಷಣೆ, ನಿಂದನೆಗಳಿಗೆ ಕಾರಣವಾಗಿ ಪರಿಣಮಿಸಿದೆ : ಹೀಗಾಗುವುದು ಸಲ್ಲದು.

ಕೆಲವೊಮ್ಮೆ ಇನ್ನೊಬ್ಬರನ್ನು ನಿಂದಿಸುವ ಮೂಲಕ ತನ್ನ ಉತ್ಕರ್ಷವನ್ನು ಪ್ರಕಟಿಸುವ ಚಾಯಮಾನದವರೂ ಇದ್ದಾರೆ.

*ಆತ್ಮೋತ್ಕರ್ಷಂನ ಮಾರ್ಗೇತಪರೇಷಾಂ ಪರನಿಂದಯಾ*
*ಸ್ವಗುಣೈರೇವ ಮಾರ್ಗೇತ ವಿಪ್ರಕರ್ಷಂ ಪೃಥಕ್‌ಜನಾತ್*

ಇತರರನ್ನು ನಿಂದಿಸುವುದರ ಮೂಲಕ ತನ್ನ ಉತ್ಕರ್ಷವನ್ನು ಸಾಧಿಸಲು ಹವಣಿಸಬಾರದು; ತನ್ನ ಗುಣಗಳಿಂದಲೇ ಇತರರಿಂದ ದೂರವಿರುವುದನ್ನು ಕಲಿಯಬೇಕು. ಹಿತೋಪದೇಶದಿಂದ ಈ ನುಡಿ ಎಷ್ಟು ಅರ್ಥವತ್ತಾದುದು. ಮೆಲುಕು ಹಾಕಿದಷ್ಟು ಮನಕ್ಕೆ ಆಪ್ಯಾಯನವಾಗುತ್ತದೆ.






ನಾವು ಸ್ವತಃ ನೋವನ್ನು ಅನುಭವಿಸುತ್ತಿದ್ದರೂ ಇತರರಿಗೆ ನೋವುಂಟುಮಾಡುವಂಥ ಮಾತನ್ನಾಡಬಾರದು. ಇತರರಿಗೆ ದ್ರೋಹವಾಗುವಂಥ ಕೆಲಸ ಮಾಡಬಾರದು ಹಾಗೂ ಅಂಥ ದುರ್ಬುದ್ಧಿಯೂ ನಮ್ಮಲ್ಲಿರಬಾರದು. ಇತರರಿಗೆ ಬೇಸರವಾಗುವ ಹಾಗೂ ಲೋಕರೂಢಿಯಲ್ಲಿಲ್ಲದ ಅಥವಾ ಉಚಿತವಲ್ಲದ ಮಾತನ್ನಂತೂ ಆಡಲೇಬಾರದು. ಯಾವ ಸಂದರ್ಭದಲ್ಲಿಯೂ ಯಾವ ವಿಷಯದಲ್ಲೂ ನಾವು ಯಾರೊಬ್ಬರಿಗೂ ನೋವನ್ನುಂಟು ಮಾಡುವ ಯಾವ ಒಂದು ಮಾತನ್ನು ನುಡಿಯಲೇಬಾರದು. ನಾವು ನುಡಿಯುವ ಪ್ರತಿಯೊಂದು ಮಾತೂ ಇತರರಿಗೆ ಹಿತವನ್ನು ಉಂಟು ಮಾಡುವಂತಿರಬೇಕೇ ಹೊರತು ನೋಯಿಸುವಂಹದ್ದಾಗಬಾರದು. ಒಂದು ವೇಳೆ ಅನ್ಯರು ನಮ್ಮ ಬಗ್ಗೆ ನೋವುಂಟುಮಾಡುವ ರೀತಿಯಲ್ಲಿ ಮಾತನಾಡಿದರೂ, ನಾವು ಸ್ವತಃ ನೋವನ್ನು ಅನುಭವಿಸುತ್ತಿರುವಂತಹ ಸಮಯ ಸಂದರ್ಭದಲ್ಲೂ, ಆ ನೋವಿನ ತೀವ್ರತೆ ಎಷ್ಟೆಂದು ನಮಗನುಭವವಿರುವುದರಿಂದ ಅದೇ ನೋವನ್ನು ಇನ್ನೊಬ್ಬರಿಗೆ ನೀಡಬಾರದು ಎಂಬ ಪರಿಜ್ಞಾನವಿಟ್ಟುಕೊಂಡು ವರ್ತಿಸುವುದು ದೇವಗುಣ. ಆದುದರಿಂದ ಇತರರ ಮನಸ್ಸನ್ನು ಯಾವುದೇ ಕಾರಣಕ್ಕೂ ನೋಯಿಸುವಂತಹ ಮಾತನ್ನು ಆಡಬಾರದು ಎಂಬ ವಿಚಾರ ಔಚಿತ್ಯಪೂರ್ಣವಾದುದಾಗಿದೆ.

ಆದರೆ ಇಲ್ಲಿ ಹೇಳಿದಂತೆ ವರ್ತಿಸುವುದು ನಿಜವಾಗಿಯೂ ಸುಲಭ ಸಾಧ್ಯವಲ್ಲವಾದರೂ ಮನಸ್ಸನ್ನು ವಿಶಾಲವಿರಿಸಿಕೊಂಡರೆ ಅಷ್ಟೇನೂ ಕಷ್ಟಸಾಧ್ಯವಲ್ಲ. ಮನಕ್ಕೆ ನೋವಾದಾಗ ಮಾತು ಉಕ್ಕಿ ಬರುವಾಗ ತಾಳ್ಮೆ ವಹಿಸಿದರೆ ಒಳಿತಾಗುವುದರಲ್ಲಿ ಸಂದೇಹವಿಲ್ಲ. ನಮ್ಮನ್ನು ಜರಿಯುವುದರಿಂದ ಜರಿಯುವವರಿಗೆ ಸಂತೋಷ ಸಮಾಧಾನ ದೊರಕುತ್ತದೆಯೆಂದಾದರೆ, ಸುಲಭವಾಗಿ ನಾವು ಅವರಿಗೆ ಸಂತೋಷಪಡಿಸುವ ಕಾರ್ಯಮಾಡಿದಂತೆಯೇ ಅಲ್ಲವೇ ಎಂದು ಬಸವಣ್ಣನವರು ಹೇಳಿದುದನ್ನು ಭಾವಿಸಿ ಮೌನವಾಗಿರುವುದನ್ನು ರೂಢಿಸಿಕೊಂಡರೆ ನಮಗೂ ಇತರರಿಗೂ ಹಿತಕರ, ಸುಖಕರ, ಶುಭಕರ.

ನಮಗೆ ನಾಲಗೆ ಇರುವುದು ಬೇರೆಯವರನ್ನು ಒರಟು ಮಾತುಗಳಿಂದ ಬಯ್ಯುವುದಕ್ಕಲ್ಲ, ಹೀಯಾಳಿಸುವುದಕ್ಕಲ್ಲ, ಹಳಿಯುವುದಕ್ಕಲ್ಲ, ಮನನೋಯಿಸುವುದಕ್ಕಲ್ಲ. ಮಾತನಾಡಿದರೆ ಹೋಯ್ತು ಮುತ್ತು ಒಡೆದರೆ ಹೋಯ್ತು ಎಂಬ ಅನುಭವಿಗಳ ಅನುಭವವೇದ್ಯ ನುಡಿಗಟ್ಟನ್ನು ನಾವೆಲ್ಲ ಸದಾ ಪರಿಪಾಲಿಸುವುದನ್ನು ನಮ್ಮದಾಗಿಸಿಕೊಂಡರೆ ಅದರಿಂದ ಶಾಂತಿ ಲಭಿಸುತ್ತದೆ.

ಇಷ್ಟೆಲ್ಲ ನಮ್ಮ ಪೂರ್ವಿಕರು, ಜ್ಞಾನಿಗಳು, ಮೇಧಾವಿಗಳು, ಅನುಭಾವಿಗಳಾದಿಯಾಗಿ ಹೇಳಿದ್ದರೂ, ನಾವು [illegible] ಬಲ್ಲೆವಾದರೂ ನಮ್ಮೊಳಗಿನ ಅಸಹನೆ-ಅಸೂಯೆ ಎಂಬುದನ್ನು ಹಿಡಿತಕ್ಕಿಟ್ಟು ಕೊಳ್ಳುವುದಕ್ಕೆ ನಮಗಾಗುತ್ತಿಲ್ಲ. ಕಾರಣ ಈಗಾಗಲೇ ಮೇಲೆ ಹೇಳಿದಂತೆ ನಮ್ಮ ಜ್ಞಾನವಷ್ಟೇ ಸತ್ಯ, ಉಳಿದವರ ನಂಬಿಕೆಗಳು ಸತ್ಯವಲ್ಲ ಎಂದು ಭಾವಿಸುವ ವ್ಯಕ್ತಿಗತ ಈ ಸ್ವಭಾವವೇ ಪರಸ್ಪರ ದೂಷಣೆ, ನಿಂದನೆಗಳಿಗೆ ಕಾರಣವಾಗಿ ಪರಿಣಮಿಸಿವೆ. ಇದನ್ನು ಮೀರಿ ನಿಲ್ಲುವ ಆವಶ್ಯಕತೆ ಇದೆ.

ಇಲ್ಲಿ ಶ್ರೀ ಅರವಿಂದಾಶ್ರಮದ ಶ್ರೀಮಾತೆಯವರು ಹೇಳಿದ ನುಡಿಗಳನ್ನು ನೆನಪು ಮಾಡಿಕೊಳ್ಳುವುದು ಒಳಿತು. "ವಿಷಯಗಳ ಸತ್ಯತೆ ಬಗೆಗೆ ನೀವು ಹೊಂದಿದ್ದ ವೈಯುಕ್ತಿಕ ಸಂಪರ್ಕ. ನಿಮಗೆ ವೈಯಕ್ತಿಕ ಸ್ವಾರಸ್ಯಕರ ಬಹುಶಃ ನಿರ್ಣಾಯಕ ಅನುಭವವನ್ನು ಕೊಟ್ಟಿರಬಹುದು. ಆದರೆ ಆ ಸಂಪರ್ಕವು ನಿಮಗೆ ನಿರ್ಣಾಯಕ ಅನುಭವವನ್ನು ಕೊಟ್ಟಾಗಲು ಕೂಡ ಅದು ವೈಯುಕ್ತಿಕ ಅನುಭವವೆಂದು ಮತ್ತು ಅದೇ ಸಂಪರ್ಕವು ಇತರರಿಗೆ ಅಂತಹುದೇ ಅನುಭವವನ್ನು ಕೊಡುವುದೆಂದು ಕಲ್ಪಿಸಿಕೊಳ್ಳಬಾರದು. ಅದು ಕೇವಲ ವೈಯಕ್ತಿಕ ವಿಷಯವೆಂದೂ ವ್ಯಕ್ತಿನಿಷ್ಠವಾದುದೆಂದು ಸರ್ವತಂತ್ರ ಸ್ವತಂತ್ರವಲ್ಲವೆಂದೂ ಮತ್ತು ಸಾಮಾನ್ಯ ನಿಯಮವಲ್ಲವೆಂಬುದನ್ನು ನೀವು ತಿಳಿದುಕೊಂಡರೆ, ಆಗ ನೀವು ಇತರರ ಜ್ಞಾನವನ್ನು ತುಚ್ಛವಾಗಿ ಕಾಣಲಾರಿರಿ ಮತ್ತು ನಿಮ್ಮ ಸ್ವಂತದ ದೃಷ್ಟಿಕೋನವನ್ನು ಅವರ ಮೇಲೆ ಹೇರಲಾರಿರಿ". ಆದ್ದರಿಂದಲೇ ಶ್ರೀ ಅರವಿಂದರು ಬೋಧಿಸಿದ್ದರು – "ನಿಮ್ಮ ನಂಬಿಕೆಗಳಿಗೆ ಮಾತ್ರ ಜ್ಞಾನದ ಹೆಸರನ್ನು ಕೊಡುವುದಾಗಲಿ ಮತ್ತು ಇತರರ ನಂಬಿಕೆಗಳಿಗೆ ಅಜ್ಞಾನ ಅಥವಾ ಅಳಲೆಕಾಯಿ ಪಾಂಡಿತ್ಯವೆಂದು ಹೆಸರಿಸುವುದಾಗಲಿ ಬೇಡ" ಎಂದು. ಅವರ ಉದ್ದೇಶವೇನಿತ್ತೆಂದರೆ ಯಾವ ತಪ್ಪಿಗಾಗಿ ಇತರರನ್ನು ಅಪಹಾಸ್ಯ ಮಾಡುವೆವೋ ಅದೇ ತಪ್ಪನ್ನು ನಾವು ಮಾಡುತ್ತಿರುತ್ತೇವೆಂಬುದನ್ನು ನಮ್ಮ ಗಮನಕ್ಕೆ ತರುವುದಾಗಿತ್ತು. ಇದನ್ನು ಮನಗಂಡು ಪರರಭಾವನೆಯನ್ನು ಚಿಂತನವನ್ನು ತೆಗಳುವ ಅಸಹನಾ ಮನೋಭಾವವನ್ನು ತ್ಯಜಿಸಿ ನನ್ನ ಚಿಂತನೆಯಷ್ಟೇ ಪರರ ಚಿಂತನೆಯೂ ಸತ್ಯವಾದುದು ಎಂದು ಮನಗಾಣುವ ಸ್ವಭಾವವನ್ನು ನಾವು ಬೆಳೆಸಿಕೊಂಡರೆ ಸಮಾಜದಲ್ಲಿ ನಡೆಯುವ ಎನಿತೋ ಸಂಘರ್ಷಗಳು ನೆಲಕಚ್ಚಿಯಾವು. ನಮಗೆ ಗೋಚರವಾಗುವುದು ವಾಸ್ತವಿಕತೆಯ ಒಂದು ಗೆರೆ ಮಾತ್ರ ಅಥವಾ ಒಂದು ಮಗ್ಗಲು ಮಾತ್ರ. ಹಾಗಿರುವಾಗ ನಮ್ಮದು ಶಿಷ್ಟ ಎಂದು ಹೊಗಳಿಕೊಂಡು ಇನ್ನೊಬ್ಬರದು ನಷ್ಟ ಎಂದು ಹೀಗಳೆಯುವ ಬದಲು ಇನ್ನೊಬ್ಬರದ್ದೂ ನಮ್ಮಷ್ಟೇ ಶಿಷ್ಟವಾದುದಾಗಿರಬಾರದೇಕೆ ಎಂದು ಭಾವಿಸುವ ಗೌರವಿಸುವ ಗುಣ ಬೆಳಸಿಕೊಂಡಾಗ ಮಾತ್ರ ಅಸಹಿಷ್ಣುತೆಯ ಕಾಳರಾತ್ರಿ [illegible]ವಾಗಿ ಜ್ಞಾನಭಾಸ್ಕರ ಮೂಡಿ ಬರಲು ಅವಕಾಶವಾಗುತ್ತದೆ.

# ಜನವರಿ ತಿಂಗಳಲ್ಲಿ ಬರುವ ಮಹತ್ವದ ದಿನಗಳು

– ಶಕುಂತಲ. ಯು.
'ಜ್ಯೋತಿರ್ಲಿಂಗ' ೧ನೇ ಕ್ರಾಸ್,
ಹೈಸ್ಕೂಲ್ ಬಡಾವಣೆ, ಹೊನ್ನಾಳಿ – ೫೭೭೨೧೭.

### ಜನವರಿ–೧ "ವಿಶ್ವಶಾಂತಿ ದಿನ"

ನೂತನ ವರ್ಷದ ಪ್ರಾರಂಭದ ದಿನವನ್ನು ವಿಶ್ವಶಾಂತಿ ದಿನ ಎಂದು ಆಚರಿಸುವರು. ಹಳೆಯ ಕಹಿ ಘಟನೆ–ಪ್ರಸಂಗಗಳನ್ನು ಮರೆತು ಹೊಸ ದಿನಗಳ ಕನಸನ್ನು ಹೊತ್ತು ಹೊಸ ಜನ್ಮ ಪಡೆದಂತೆ ಹೊಸ ಆಶೆ–ಭರವಸೆ, ನಿರೀಕ್ಷೆಗಳನ್ನು ಹೊತ್ತು ತರುವ ದಿನ. ಇಂದಿನ ಭಯೋತ್ಪಾದಕತೆ, ಹಿಂಸೆ, ಆಂತರಿಕ ಜಗಳ, ಕೋಮು ಮತೀಯ ಘರ್ಷಣೆ ಮುಂತಾದ ವಿಚಾರಗಳ ನಡುವೆ ಇಡೀ ಪ್ರಪಂಚ ನಲುಗುತ್ತಲಿವೆ. ದೇಶ ಸಮಾಜ ಅಷ್ಟೇ ಅಲ್ಲದೆ ದೇಶ–ದೇಶಗಳ ನಡುವಿನ ಶಾಂತಿ ಸ್ಥಾಪನೆ ಉದ್ದೇಶ ಈ ದಿನದ ಆಚರಣೆ.

### ಜನವರಿ–೧೦ 'ವಿಶ್ವ ಹಾಸ್ಯಗಾರರ ದಿನ'

ಮನದಾಳದ ನೋವನ್ನು ಮರೆಸುವ ಭಾವನೆ ಹಾಸ್ಯ. ಮನಸ್ಸನ್ನು ಪ್ರಫುಲ್ಲಗೊಳಿಸುವ, ಸ್ನಾಯುಗಳನ್ನು ಸಡಿಲಗೊಳಿಸುವ ಕ್ರಿಯೆ ಹಾಸ್ಯ. ಬೀರಬಲ್ಲ, ತೆನಾಲಿರಾಮಕೃಷ್ಣ, ಚಲನಚಿತ್ರದ ನರಸಿಂಹರಾಜು, ಬಾಲಕೃಷ್ಣ, ದ್ವಾರಕೀಶ್, ಎನ್.ಎಸ್. ರಾವ್, ದಿನೇಶ್, ಜಗತ್ಪ್ರಸಿದ್ಧ ಚಾರ್ಲಿಚಾಪ್ಲಿನ್ ಇಂಥವರನೇಕರನ್ನು ಸ್ಮರಿಸುವ ದಿನ. ಹಾಸ್ಯ ಸಾಹಿತಿಗಳಾದ ಕೈಲಾಸಂ, ಬೀಚಿ, ದಾಶರಾಥಿ ದೀಕ್ಷಿತ, ಸುನಂದಮ್ಮ ಮುಂತಾದವರನ್ನು ನೆನಪಿಸಿಕೊಂಡು ಅವರ ಕೃತಿಗಳನ್ನು ಮೆಲುಕು ಹಾಕುವ ದಿನ. ಈ ದಿನ ಅಷ್ಟೇ ಅಲ್ಲ ನೋವಾದಾಗ ನಲಿವನ್ನು ತಂದುಕೊಳ್ಳಬೇಕೆಂದಾಗ ಸ್ಮರಿಸುವ ದಿನ.

### ಜನವರಿ–೧೨ 'ಯುವಜನರ ದಿನಾಚರಣೆ'

ಸ್ವಾಮಿ ವಿವೇಕಾನಂದರ ಜನ್ಮದಿನದ ಸ್ಮರಣಾರ್ಥ ಯುವಜನರ ದಿನವಾಗಿ ಆಚರಿಸಲಾಗುತ್ತದೆ. ರಾಮಕೃಷ್ಣ ಪರಮಹಂಸರ ಶಿಷ್ಯರಾಗಿ, ಹಿಂದೂ ಧರ್ಮ ಪ್ರವರ್ತಕರಾಗಿ, ಸಂಸ್ಕೃತಿ ವಾಹಕರಾಗಿ, ಯುವಜನರನ್ನು ಜಾಗೃತಿಗೊಳಿಸಿದರು. ಈ ದೇಶಕ್ಕೆ ಬೇಕಾಗಿರುವುದು ಶಕ್ತಿಯುತ ಯುವಕರು. "ಶಕ್ತಿಯೇ ಜೀವನ ದೌರ್ಬಲ್ಯವೇ ಮರಣ ದೌರ್ಬಲ್ಯ ತ್ಯಜಿಸಿ" ವಿವೇಕಾನಂದರಂತೆ ಸದೃಢ ದೇಹ ಮನಸ್ಸುಳ್ಳ, ಉದಾತ್ತ ಚಿಂತನೆಯುಳ್ಳ ಯುವಕರು ಈ ದೇಶವನ್ನು ರೂಪಿಸಲು ಚಿಂತನೆಯುಳ್ಳ ಯುವಕರು ಈ ದೇಶವನ್ನು ರೂಪಿಸಲು ಸಾಧ್ಯ ಎಂಬ ಸಂದೇಶ ಈ ದಿನಾಚರಣೆ. ವಿಶ್ವಸಂಸ್ಥೆ ವಿವೇಕಾನಂದರಿಗೆ ಈ ಮೂಲಕ ಗೌರವಿಸಿದೆ.

### ಜನವರಿ–೧೫ 'ಸೇನಾ ದಿನಾಚರಣೆ'

ಭಾರತದ ಯೋಧರ ತ್ಯಾಗ, ಬಲಿದಾನಗಳಿಗೆ ಗೌರವ ಸಲ್ಲಿಸುವ ದಿನ. ಕಾಶ್ಮೀರದ ಗಡಿಯಲ್ಲಿ ದೇಶ ರಕ್ಷಿಸುವ ಯೋಧರಿಗೆ ಈ ಗೌರವ. ವಿಶೇಷವಾಗಿ ಭೂಸೇನಾದಳದವರಿಗೆ ಈ ದಿನ ಮುಡಿಪು. ಭಾರತೀಯ ಸೇವೆ ಐದು ಸಂಘಟನಾ ವ್ಯೂಹ ಹೊಂದಿದೆ. ದಕ್ಷಿಣ, ಉತ್ತರ, ಪೂರ್ವ, ಪಶ್ಚಿಮ ಮಧ್ಯ ಕಮಾಂಡ್‌ಗಳು ಇವೆ. ಮೊತ್ತ ಮೊದಲ ಕಮಾಂಡರ್–ಇನ್–ಚೀಫ್ ಕೆ.ಎಂ. ಕಾರ್ಯಪ್ಪ 'ಮೊದಲ ಫೀಲ್ಡ್ ಮಾರ್ಷಲ್ ಎಸ್.ಎಚ್. ಎಫ್.ಜೆ. ಮಾಣಿಕಷಾ. ಅತಿ ಹೆಚ್ಚು ಕಾಲ ಭೂಸೇನಾ ಮುಖ್ಯಸ್ಥರಾಗಿದ್ದವರು ಕೆ.ಎಸ್. ತಿಮ್ಮಯ್ಯ

### ಜನವರಿ–೨೬ 'ಗಣರಾಜ್ಯ ದಿನಾಚರಣೆ'

ಡಾ॥ ರಾಜೇಂದ್ರ ಪ್ರಸಾದ ಅವರ ಅಧ್ಯಕ್ಷತೆಯಲ್ಲಿ ಡಾ॥ ಬಿ.ಆರ್. ಅಂಬೇಡ್ಕರ್ ಅವರ ಸಂವಿಧಾನ ಕರಡು ಸಮಿತಿ ಅಧ್ಯಕ್ಷತೆಯುಲ್ಲಿ ಸಂವಿಧಾನ ರಚನೆ ಆಗಿ ಜನವರಿ ೨೬ ೧೯೫೦ರಂದು ಜಾರಿಗೆ ಬಂದಿತು. ಅದರ ಸವಿ ನೆನಪಿಗಾಗಿ ಜನವರಿ ೨೬ ಗಣರಾಜ್ಯ ದಿನಾಚರಣೆ, ೧೯೨೯ ಜನವರಿ ೨೬ರಂದು ಲಾಹೋರಿನಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ "ಪೂರ್ಣ ಸ್ವಾತಂತ್ರ್ಯ" ಘೋಷಣೆ ಮಾಡಿದ ಸ್ಮರಣಾರ್ಥ ಜನವರಿ ೨೬. ಈ ದಿನವನ್ನು ಸಂವಿಧಾನ ಜಾರಿಗೆ ಬರುವ ದಿನವನ್ನಾಗಿ ಅಂಗೀಕರಿಸಲಾಯಿತು. ಈ ಸಂವಿಧಾನದ ಪ್ರಕಾರ ಭಾರತ ಸ್ವತಂತ್ರ ಪ್ರಜಾಸತ್ತಾತ್ಮಕ, ಜಾತ್ಯಾತೀತ, ಸಮಾಜವಾದಿ ಗಣರಾಜ್ಯ. ಎಲ್ಲರಿಗೂ ಸಂವಿಧಾನ ಬದ್ಧವಾಗಿ ಮೂಲಭೂತಹಕ್ಕು, ಸ್ವಾತಂತ್ರ್ಯ, ಕರ್ತವ್ಯ ನೀಡಿ ಎಲ್ಲರೂ ಸಮಾನರೆಂದು ಪರಿಗಣಿಸಿದೆ. ಹಾಗೂ ಸರ್ವೋಚ್ಚ ನ್ಯಾಯಾಲಯ ಸಂವಿಧಾನ ಮತ್ತು ಮೂಲಭೂತ ಹಕ್ಕುಗಳ ರಕ್ಷಕ.

### ಜನವರಿ–೨೮ 'ಸರ್ವೋಚ್ಚ ನ್ಯಾಯಾಲಯ ದಿನ'

೧೯೩೫ರ ಭಾರತ ಕಾಯಿದೆ ಪ್ರಕಾರ ಭಾರತದಲ್ಲಿ ಸ್ವತಂತ್ರವಾದ ಫೆಡರಲ್ ಕೋರ್ಟು ಆಫ್ ಇಂಡಿಯಾ ಜನ್ಮ ತಾಳಿತು.





ಸಂವಿಧಾನದನ್ವಯ Supreme Court of India ಎಂಬ ಹೆಸರಿನಿಂದ ದೆಹಲಿಯಲ್ಲಿ ಅಸ್ತಿತ್ವವಾಗಿದೆ. ಸರ್ವೋಚ್ಚ ನ್ಯಾಯಾಲಯ ಸ್ವತಂತ್ರ, ನಿಷ್ಪಕ್ಷಪಾತ ಮತ್ತು ಅಂತಿಮ ಮನವಿ ಅಧಿಕಾರ ಹೊಂದಿದೆ. ಸಿವಿಲ್ ಮತ್ತು ಕ್ರಿಮಿನಲ್ ಏಕರೂಪ ಕಾಯಿದೆಗಳನ್ನು ಹೊಂದಿದೆ. ಸರ್ವೋಚ್ಚ ನ್ಯಾಯಾಲಯದ ಅಡಿಯಲ್ಲಿ ರಾಜ್ಯಗಳ ಉಚ್ಚ ನ್ಯಾಯಾಲಯಗಳು ಅದೇ ರೀತಿ ಜಿಲ್ಲಾ, ತಾಲ್ಲೂಕು ನ್ಯಾಯಾಲಯಗಳು ಕಾರ್ಯನಿರ್ವಹಿಸುತ್ತವೆ. ನ್ಯಾಯಾಲಯು ಸರಕಾರದ ರೀತಿ–ನೀತಿ, ರೂಪಿಸುವ ಕಾನೂನುಗಳು ಸಂವಿಧಾನ ಬಾಹೀರವಾಗಿದ್ದರೆ ವಿಮರ್ಶಿಸುವ, ತಡೆ ಹಿಡಿಯುವ, ರದ್ದುಪಡಿಸುವ 'ನ್ಯಾಯಿಕ ವಿಮರ್ಶೆ'ಯ ಅಧಿಕಾರ ಹೊಂದಿದೆ. ಸರ್ವೋಚ್ಚ ನ್ಯಾಯಾಲಯ ಮೂಲಭೂತ ಹಕ್ಕುಗಳ ರಕ್ಷಕ, ನ್ಯಾಯಾಲಯದಲ್ಲಿ ಸಮಾನತೆ ಅಂಶಗಳನ್ನು ಒಳಗೊಂಡಿದೆ. ಆರಂಭದಲ್ಲಿ ಮುಖ್ಯ ನ್ಯಾಯಾಧೀಶರು ಮತ್ತು ಏಳು ಮಂದಿ ಇತರೆ ನ್ಯಾಯಾಧೀಶರಿದ್ದರೆ ಈಗ ಅದರ ಸಂಖ್ಯೆ ೨೪ಕ್ಕೆ ಏರಿದೆ.

### ಜನವರಿ ೩೦ 'ಹುತಾತ್ಮರ ದಿನ'

ರಾಷ್ಟ್ರಪಿತ ಮಹಾತ್ಮಾ ಗಾಂಧೀಜಿಯವರ ಕೊಲೆಯಾದ ದಿನ ಹುತಾತ್ಮರ ದಿನ ಎಂದು ಆಚರಿಸಲಾಗುವುದು. ಇದನ್ನು ಸರ್ವೋದಯ ದಿನಾಚರಣೆ, ಕುಷ್ಠರೋಗ ನಿವಾರಣಾ ದಿನ ಎಂದೂ ಆಚರಿಸುವರು.

೧೯೪೮ ಜನವರಿ ೩೦ ರಂದು ಗೋಡ್ಸೆ ಎಂಬ ಹಂತಕನಿಂದ ಗಾಂಧಿ ಹತ್ಯೆಯಾದರು. ದೇಶದ ಮಹಾತ್ಮಾ ದೇಶಕ್ಕಾಗಿ ಹುತಾತ್ಮರಾದರು. ಇದೇ ರೀತಿ ಸ್ವಾತಂತ್ರ್ಯ ಹೋರಾಟದಲ್ಲಿ ಭಗತ್‌ಸಿಂಗ್, ಚಂದ್ರಶೇಖರ ಆಜಾದ್, ಝಾನ್ಸಿರಾಣಿ ಲಕ್ಷ್ಮಿಬಾಯಿ, ಕಿತ್ತೂರು ರಾಣಿ ಚೆನ್ನಮ್ಮ ಇತ್ಯಾದಿ ಅನೇಕರು ಹುತಾತ್ಮರಾಗಿದ್ದಾರೆ. ಅವರೆಲ್ಲರ ಗೌರವದ ಸಲ್ಲಿಕೆಯ ದಿನ ಹುತಾತ್ಮರ ದಿನ.

ಗಾಂಧೀಜಿಯವರ ಕನಸು ರಾಮರಾಜ್ಯ. ಅಲ್ಲಿ ಸರ್ವರ ಉದಯ. ಜಾತಿ, ಮತ, ವರ್ಣ, ವರ್ಗಗಳ ತಾರತಮ್ಯವಿಲ್ಲ. ಬೌದ್ಧಿಕ ಬಲ, ದೈಹಿಕ ಕ್ರಮಗಳಲ್ಲಿ ವ್ಯತ್ಯಾಸವಿಲ್ಲ. ಸರ್ವರ ಏಳ್ಗೆಯೇ ಸರ್ವೋದಯ. ತಾತಾ ಕಾಲೇಲಕರ, ವಿನೋಬಾಭಾವೆ, ಜಯಪ್ರಕಾಶ ನಾರಾಯಣ ಸರ್ವೋದಯವನ್ನು ಅನುಷ್ಠಾನಕ್ಕೆ ತಂದರು. ವಿನೋಬಾಜಿಯವರ ಭೂದಾನ ಚಳುವಳಿ ಮೌನಕ್ರಾಂತಿಯಾಗಿತ್ತು. ಕರ್ನಾಟಕದಲ್ಲಿ ೨೧ ಸಾವಿರ ಎಕರೆ ಭೂಮಿ ಸಂಗ್ರಹವಾಗಿತ್ತು. ಜಯಪ್ರಕಾಶ ನಾರಾಯಣರ "ಜೆ.ಪಿ. ಚಳುವಳಿ" ಯುವ ಸಂಘಟನೆಗೆ ಪೂರಕವಾಗಿತ್ತು. ಈ ನಾಯಕರ ನಂತರ ನಾಯಕತ್ವದ ಕೊರತೆಯಿಂದ ಸರ್ವೋದಯ ತನ್ನ ಅಸ್ತಿತ್ವವನ್ನು ಕಳೆದುಕೊಂಡಿತು.

ಗಾಂಧೀಜಿ ತಮ್ಮ ಆಶ್ರಮದಲ್ಲಿಯ ಎಲ್ಲ ಕಾರ್ಯಗಳನ್ನು ತಾವೇ ಮಾಡುತ್ತಿದ್ದ ಹಾಗೆ, ಹರಿಜನರ ಕೇರಿ ಸ್ವಚ್ಛಗೊಳಿಸಿದ ಹಾಗೆ, ಯಾರೊಬ್ಬರೂ ಮುಟ್ಟಲು ಹಿಂಜರಿಯುತ್ತಿದ್ದ ಕುಷ್ಠ ರೋಗಿಗಳ ಆರೈಕೆ ಮಾಡುತ್ತಿದ್ದರು. ಕುಷ್ಠರೋಗ ಅಂಟುರೋಗವಲ್ಲ. ಅದಕ್ಕೆ ಬೇಕಾಗಿರುವುದು ಸ್ವಚ್ಛತೆ, ಸಾಂತ್ವನ, ಅವರಲ್ಲಿ ಧೈರ್ಯ ತುಂಬುವುದು ಮುಖ್ಯ. ಅದನ್ನು ಪ್ರಾಥಮಿಕವಾಗಿ ಗುರುತಿಸಿ ಲಭ್ಯವಾದ ಅಗತ್ಯವಾದ ಚಿಕಿತ್ಸೆ ಪಡೆಯಲು ಜಾಗೃತಿ ಮೂಡಿಸುವುದು ಈ ದಿನದ ಉದ್ದೇಶ.

*

ಆನೆಯನೇರಿಕೊಂಡು ಹೋದಿರೆ ನೀವು?
ಕುದುರೆಯನೇರಿಕೊಂಡು ಹೋದಿರೆ ನೀವು?
ಕುಂಕುಮ ಕಸ್ತೂರಿಯ ಪೂಸಿಕೊಂಡು, ಹೋದಿರೆ ಅಣ್ಣಾ
ಸತ್ಯದ ನಿಲವನರಿಯದೆ ಹೋದಿರಲ್ಲಾ!
ಸದ್ಗುಣವೆಂಬ ಫಲವ ಬಿತ್ತಿ ಬೆಳೆಯದೆ ಹೋದಿರಲ್ಲಾ,
ಅಹಂಕಾರವೆಂಬಸದ ಮದ ಗಜವೇರಿ
ವಿಧಿಗೆ ಗುರಿಯಾಗಿ ನೀವು ಹೋದಿರಲ್ಲಾ!
ನಮ್ಮ ಕೂಡಲ ಸಂಗಮ ದೇವರನರಿಯದೆ
ನರಕಕ್ಕೆ ಭಾಜನವಾದಿರಲ್ಲಾ.

ಆನೊಬ್ಬನು, ಸುಡುವರೈವರು;
ಮೇಲೆ ಸಿಚ್ಚು ಘನ; ನಿಲಲು ಬಾರದು;
ಕಾಡ ಬಸವನ ಹುಲಿ ಕೊಂಡೊಯ್ವರೆ
ಆರಯ್ಯಲಾಗದೆ, ಕೂಡಲ ಸಂಗಮದೇವಾ?
ಮೇಲಾಗಲೊಲ್ಲೆನು ಸೀಳಾಗಲೊಲ್ಲದೆ;
ಸೀಳಿಂಗಲ್ಲದೆ ಹಯನ ಕರೆವುದೇ?
ಮೇಲಾಗಿ ನರಕದೊಳೋಲಾಡಲಾರೆನು;
ನಿಮ್ಮ ಶರಣರ ಪಾದಕ್ಕೆ ಸೀಳಾಗಿರಿಸು,
ಮಹಾದಾನಿ, ಕೂಡಲ ಸಂಗಮದೇವಾ.

– ಬಸವಣ್ಣ

॥ ಓಂ ಶ್ರೀ ಗುರು ಬಸವಲಿಂಗಾಯ ನಮಃ ॥

# ೨೦೦೮ನೇ ವರ್ಷದ ಬಸವಾದಿ ಶರಣರ ಸ್ಮರಣೋತ್ಸವಗಳು

ಸಂಗ್ರಹ : ಪ್ರೊ. ಸಿದ್ದಣ್ಣ ಲಂಗೋಟಿ (ಚಾಂದಕವಠೆ) *

| | | | | |
|---|---|---|---|---|
| ಜನವರಿ | ೮ | ಮಂಗಳವಾರ | ಎಳ್ಳ ಅಮಾವಾಸ್ಯೆ | ಒಕ್ಕಲಿಗ ಮುದ್ದಣ್ಣ |
| ಜನವರಿ | ೧೫ | ಮಂಗಳವಾರ | ಸಂಕ್ರಮಣ | ಸಿದ್ಧರಾಮೇಶ್ವರ |
| ಜನವರಿ | ೨೨ | ಮಂಗಳವಾರ | ಬನದ ಹುಣ್ಣಿಮೆ | ಮೇದಾರ ಕೇತಯ್ಯ |
| ಫೆಬ್ರುವರಿ | ೭ | ಗುರುವಾರ | ಅವರಾತ್ರಿ ಅಮಾವಾಸ್ಯೆ | ಜೇಡರ ದಾಸಿಮಯ್ಯ |
| ಫೆಬ್ರುವರಿ | ೨೧ | ಗುರುವಾರ | ಭಾರತ ಹುಣ್ಣಿಮೆ | ಕಿನ್ನರಿ ಬೊಮ್ಮಯ್ಯ |
| ಮಾರ್ಚ್ | ೫ | ಬುಧವಾರ | ಮಹಾಶಿವರಾತ್ರಿ | ಡೋಹರ ಕಕ್ಕಯ್ಯ |
| ಮಾರ್ಚ್ | ೨೧ | ಶುಕ್ರವಾರ | ಹೋಳಿ ಹುಣ್ಣಿಮೆ | ಬಿಬ್ಬಿ ಬಾಚಯ್ಯ |
| ಏಪ್ರಿಲ್ | ೭ | ಸೋಮವಾರ | ಯುಗಾದಿ ಪಾಡ್ಯ | ಅಲ್ಲಮಪ್ರಭು |
| ಏಪ್ರಿಲ್ | ೨೦ | ರವಿವಾರ | ದವನದ ಹುಣ್ಣಿಮೆ | ಅಕ್ಕಮಹಾದೇವಿ |
| ಮೇ | ೭ | ಬುಧವಾರ | ಅಕ್ಷಯ ತೃತಿಯ | ಬಸವಣ್ಣನವರು |
| ಜೂನ್ | ೩ | ಮಂಗಳವಾರ | ಬಾದಾಮಿ ಅಮಾವಾಸ್ಯೆ | ಕುರುಬಗೊಲ್ಲಾಳ |
| ಜೂನ್ | ೧೮ | ಬುಧವಾರ | ಕಾರ ಹುಣ್ಣಿಮೆ | ಅಂಬಿಗರ ಚೌಡಯ್ಯ |
| ಜುಲೈ | ೧೮ | ಶುಕ್ರವಾರ | ಕಡ್ಲಿಗಡಬ ಹುಣ್ಣಿಮೆ | ಹಡಪದ ಅಪ್ಪಣ್ಣ |
| ಆಗಸ್ಟ್ | ೬ | ಬುಧವಾರ | ನಾಗಪಂಚಮಿ | ಅಕ್ಕನಾಗಮ್ಮ |
| ಆಗಸ್ಟ್ | ೧೬ | ಶನಿವಾರ | ನೂಲ ಹುಣ್ಣಿಮೆ | ನುಲಿಯ ಚಂದಯ್ಯ |
| ಸೆಪ್ಟೆಂಬರ್ | ೩ | ಬುಧವಾರ | ಗಣೇಶ ಚೌತಿ | ಮಡಿವಾಳ ಮಾಚಿದೇವ |
| ಅಕ್ಟೋಬರ್ | ೮ | ಬುಧವಾರ | ಮಹಾನವಮಿ | ಹರಳಯ್ಯ-ಮಧುವಯ್ಯ |
| ಅಕ್ಟೋಬರ್ | ೯ | ಗುರುವಾರ | ವಿಜಯದಶಮಿ | ಕಲ್ಯಾಣಕ್ರಾಂತಿ ವಿಜಯ |
| ಅಕ್ಟೋಬರ್ | ೧೪ | ಮಂಗಳವಾರ | ಶೀಗಿ ಹುಣ್ಣಿಮೆ | ಗಂಗಾಂಬಿಕೆ |
| ಅಕ್ಟೋಬರ್ | ೨೯ | ಬುಧವಾರ | ದೀಪಾವಳಿ ಪಾಡ್ಯ | ಚೆನ್ನಬಸವಣ್ಣ |
| ನವೆಂಬರ್ | ೧೩ | ಗುರುವಾರ | ಗೌರಿ ಹುಣ್ಣಿಮೆ | ನೀಲಾಂಬಿಕೆ |
| ಡಿಸೆಂಬರ್ | ೧೨ | ಶುಕ್ರವಾರ | ಹೊಸ್ತಿಲ ಹುಣ್ಣಿಮೆ | ಮಾದಾರ ಚೆನ್ನಯ್ಯ |
| ಡಿಸೆಂಬರ್ | ೨೭ | ಶನಿವಾರ | ಎಳ್ಳ ಅಮಾವಾಸ್ಯೆ | ಒಕ್ಕಲಿಗ ಮುದ್ದಣ್ಣ |

## ವಿಶೇಷ ಸ್ಮರಣೋತ್ಸವಗಳು

| | | | | |
|---|---|---|---|---|
| ಫೆಬ್ರುವರಿ | ೧೮ | ಸೋಮವಾರ | ಶರಣ | ಹರ್ಡೇಕರ ಮಂಜಪ್ಪನವರು |
| ಜುಲೈ | ೨ | ಬುಧವಾರ | ಶರಣ | ಫ.ಗು. ಹಳಕಟ್ಟಿ |
| ಅಕ್ಟೋಬರ್ | ೨೮ | ಮಂಗಳವಾರ | ಶರಣ | ಉತ್ತಂಗಿ ಚೆನ್ನಪ್ಪನವರು |

* ಗೌ॥ ಸಂಪಾದಕರು, ಬಸವ ಬೆಳಗು ಪತ್ರಿಕೆ, ರಾಮದುರ್ಗ - ೫೯೧೧೨೩, ಬೆಳಗಾವಿ ಜಿಲ್ಲೆ.





# ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ೫೫ನೇ ಸರ್ವಸದಸ್ಯರ ವಾರ್ಷಿಕ ಮಹಾಧಿವೇಶನ

ವರದಿ : ಎಚ್.ಎಸ್. ಸಿದ್ಧಗಂಗಪ್ಪ
ಚಿತ್ರಗಳು : ಬಿ.ಸಿ. ಸುರೇಶ್



ಶ್ರೀಮಠದಲ್ಲಿ ಡಿಸೆಂಬರ್ ೧೬ರಂದು ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ೫೫ನೇ ಸರ್ವಸದಸ್ಯರ ವಾರ್ಷಿಕ ಮಹಾಧಿವೇಶನ ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯ ಸಾನ್ನಿಧ್ಯದಲ್ಲಿ ನಡೆಯಿತು. ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಜ್ಯೋತಿ ಬೆಳಗಿಸಿ ಅಧಿವೇಶನ ಉದ್ಘಾಟಿಸಿದರು. ಪೂಜ್ಯ ಶ್ರೀಗಳು ತಮ್ಮ ಉದ್ಘಾಟನಾ ಸಂದೇಶದಲ್ಲಿ "ಇದೊಂದು ಅತ್ಯಂತ ಆತ್ಮೀಯವಾದ ಪವಿತ್ರವಾದ ಸನ್ನಿವೇಶ. ಪ್ರತಿವರ್ಷ ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳು ಇದೊಂದು ಸುಸಂದರ್ಭ ಎಂದು ಭಾವಿಸಿ ಪೂಜ್ಯರ ಆಶೀರ್ವಾದ ಹಾಗೂ ಅವರ ಸಾನ್ನಿಧ್ಯ ಪಡೆಯಲು ಆಗಮಿಸುತ್ತಿರುವುದು ಪೂಜ್ಯರಿಗೆ ಸಂತೋಷದ ಕ್ಷಣಗಳು. ತಾಯಿ ಮಗುವಿನ ಆತ್ಮೀಯ ಸಂಬಂಧ. ಪೂಜ್ಯರು ನಿಮ್ಮನ್ನೆಲ್ಲ ಕಷ್ಟಪಟ್ಟು ಬೆಳೆಸಿದ್ದಾರೆ. ಅವರನ್ನು ನೋಡಿದಾಗ ಸೇವೆ, ಕಾಯಕ, ದಾಸೋಹ ಹಾಗೂ ಶಿವಯೋಗದ ನೆನಪಾಗುತ್ತದೆ ಎಂದು ಹೇಳಿದರಲ್ಲದೆ; ನಿಮ್ಮ ಜೀವನ ಪರಿಶುದ್ಧವಾಗಿರುವಂತೆ ನೋಡಿಕೊಂಡರೆ ಪೂಜ್ಯರಿಗೆ ಅದಕ್ಕಿಂತ ಸಂತೋಷ ಬೇರೆಯಿಲ್ಲ" ಎಂದು ನುಡಿದರು.

ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿ ಸಂಘದ ಕಾರ್ಯದರ್ಶಿ ಶ್ರೀ ಕೆ.ಎಚ್. ಶಿವರುದ್ರಯ್ಯನವರು ಸಂಘದ ವಾರ್ಷಿಕ ವರದಿಯನ್ನು ಮಂಡಿಸಿದರೆ, ಶ್ರೀ ಬಿ.ಜಿ. ಗಂಗಾಧರಯ್ಯನವರು ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ ಲೆಕ್ಕ ಪರಿಶೋಧನೆ ವರದಿಯನ್ನು, ಶ್ರೀ ಹೆಚ್.ಬಿ. ಗಂಗಾಧರಯ್ಯನವರು 'ಸಿದ್ಧಗಂಗಾ' ಮಾಸ ಪತ್ರಿಕೆಯ ವರದಿಯನ್ನು ಸಭೆಯ ಗಮನಕ್ಕೆ ತಂದರು.

ಪರಮಪೂಜ್ಯ ಶ್ರೀಗಳವರ ಶತಮಾನೋತ್ಸವ ಪೂರ್ವಸಿದ್ಧತೆಯ ಬಗ್ಗೆ ಶ್ರೀ ಮುದ್ದರಂಗಯ್ಯನವರು ಮಾತನಾಡಿ ಪರಮಪೂಜ್ಯ ಶ್ರೀಗಳವರು ೭೫ ವರ್ಷಗಳಿಂದ ಶ್ರೀಗಂಧ ತೇಯ್ದಂತೆ ಸಮಾಜಕ್ಕೆ ತಮ್ಮನ್ನು ಅರ್ಪಿಸಿಕೊಂಡಿದ್ದಾರೆ ಎಂದರು. ಶ್ರೀಮಠದಲ್ಲಿ ಪ್ರಸ್ತುತ ಸ್ವಚ್ಛತಾ ನಿರ್ವಹಣಾ ನಿಧಿಯನ್ನು ಸ್ಥಾಪಿಸುವ ಅಗತ್ಯವನ್ನು ಹೇಳಿದರು.



ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರಿಂದ ನುಡಿ ಸಂದೇಶ

ಮೈಸೂರಿನ ಶ್ರೀ ಹೆಚ್. ಗಂಗಾಧರನ್ ಅವರು ಮಾತನಾಡಿ ಪ್ರತಿಯೊಬ್ಬರು ಶ್ರೀ ಸಿದ್ಧಲಿಂಗೇಶ್ವರ ಹೆಸರಿನಲ್ಲಿ ಒಂದು ಮುದವಟ್ಟು ಸ್ಥಾಪಿಸಬೇಕು. ಪ್ರತಿಯೊಬ್ಬರೂ ಪೂಜ್ಯ ಶ್ರೀಗಳವರ ಹೆಸರಿನಲ್ಲಿ ಒಂದು ಮರ ಬೆಳೆಸಿ ಆರೈಕೆ ಮಾಡಬೇಕು. ಸರ್ಕಾರದ ವತಿಯಿಂದ ಸಿದ್ಧಗಂಗಾ ಮಾಸ ಪತ್ರಿಕೆಗೆ ಜಾಹಿರಾತು ಪಡೆಯಬೇಕು ಎಂದು ಸಲಹೆ ಮಾಡಿದರು.

ನಿವೃತ್ತ ಮುಖ್ಯ ಇಂಜಿನಿಯರ್ ಶ್ರೀ ಬಿ.ಎನ್. ಚನ್ನಪ್ಪನವರು ಶತಮಾನೋತ್ಸವದ ಅಂಗವಾಗಿ ಅನುಷ್ಠಾನಗೊಳ್ಳಲಿರುವ ಯೋಜನೆಗಳ ಬಗ್ಗೆ ವಿವರಣೆ ನೀಡಿದರಲ್ಲದೆ, ಪ್ರಸ್ತುತ ನೈರ್ಮಲೀಕರಣದ ಮಹತ್ವದ ಬಗ್ಗೆ ತಿಳಿಸಿ ಬಳಸಿದ ನೀರನ್ನು ಪುನರ್‌ಬಳಕೆ ಮಾಡುವ ಬಗ್ಗೆ ಯೋಜನೆ ರೂಪಿಸುವ ಬಗ್ಗೆ ತಿಳಿಸಿದರು. ಸ್ವಚ್ಛತಾ ಕಾರ್ಯಕ್ರಮದ ಯಶಸ್ಸಿಗೆ ಎಲ್ಲರ ಸಹಕಾರ, ಆರ್ಥಿಕ ನೆರವು ನೀಡಬೇಕೆಂದು ಮನವಿ ಮಾಡಿದರು.

ರಾಜಕಾರಣಿ, ಆದರ್ಶ ರೈತ, ದಾನಿಗಳಾದ ಶ್ರೀ ಆರ್. ನಾರಾಯಣಸ್ವಾಮಿ ರೆಡ್ಡಿಯವರು ಶ್ರೀಮಠಕ್ಕೆ ಈಗಾಗಲೆ ೧೨ ಲಕ್ಷ ರೂ.ಗಳನ್ನು ಶತಮಾನೋತ್ಸವಕ್ಕೆ ೫ ಲಕ್ಷ ರೂ.ಗಳನ್ನು ನೀಡಿ ಮಾನವೀಯತೆಯನ್ನು ಮೆರೆದಿದ್ದಾರೆ. ಅವರು ಮಾತನಾಡಿ ನಾನು ದಾನಿಯಲ್ಲ, ಶಿವ ಕೊಟ್ಟಿದನ್ನು ಈ ಶಿವನಿಗೆ ಕೊಟ್ಟಿದ್ದೇನೆ. ನಾನು ನಿಮಿತ್ತಮಾತ್ರ ಎಂದು ಹೇಳುವುದರ ಮೂಲಕ ತಮ್ಮ ಸರಳತೆ, ಸೌಜನ್ಯವನ್ನು ಮೆರೆದರು. ಪೂಜ್ಯ ಶ್ರೀಗಳವರು ೧೦ ಸಾವಿರ ಮಕ್ಕಳಿಗೆ ಅನ್ನದಾನ, ವಿದ್ಯಾದಾನ, ಮಾಡುತ್ತಿರುವುದು ಮಹಾಸೇವೆ, ನಾಡಿನ ಭಾಗ್ಯ. ನಾನು ಈ ಮೊದಲು ಶ್ರೀಮಠದ ಸೇವೆಯ ಬಗ್ಗೆ ಕೇಳಿದ್ದೆ, ಕಣ್ಣಾರೆ ನೋಡುವ ಅವಕಾಶ ದೊರಕಿದ್ದು ಎಂಟು ತಿಂಗಳ ಹಿಂದೆ. ಆಗ ಶ್ರೀಮಠಕ್ಕೆ ಬಂದು ನೋಡಿದಾಗ ಶ್ರೀಮಠದ ಸೇವಾಕಾರ್ಯಗಳನ್ನು ಕಂಡು ಪ್ರಭಾವಿತನಾಗಿ ಶ್ರೀಮಠಕ್ಕೆ ಏನಾದರೂ ಸೇವೆ ಮಾಡಬೇಕು ಎಂಬ ಮನಸ್ಸಾಯಿತು. ಯಾವ ಸರ್ಕಾರವೂ ಮಾಡದ ಕೆಲಸವನ್ನು ಶ್ರೀಮಠ ಮಾಡುತ್ತದೆ ಎಂದು ಮುಕ್ತಕಂಠದಿಂದ ಶ್ಲಾಘಿಸಿದರು.

ಸಿದ್ಧಗಂಗಾ ಮಾಸ ಪತ್ರಿಕೆಯ ಸಂಪಾದಕರಾದ ಪ್ರೊ. ಹೆಚ್.ವಿ. ವೀರಭದ್ರಯ್ಯನವರು ಶತಮಾನೋತ್ಸವ ಸಂದರ್ಭದಲ್ಲಿ ಹೊರಬರುವ ಪ್ರಕಟಣೆಗಳ ಬಗ್ಗೆ ಮಾಹಿತಿ ನೀಡಿದರು. 'ಜ್ಞಾನಗಂಗಾ ಸಿದ್ಧಗಂಗಾ' ಚಲನಚಿತ್ರದ ಬಗ್ಗೆ ನಿರ್ದೇಶಕ ಶ್ರೀ ಓಂಕಾರಪ್ಪ ಮಾಹಿತಿ ನೀಡಿ, ಜನವರಿಯಲ್ಲಿ ನಾಡಿನಾದ್ಯಂತ ಚಿತ್ರ ಬಿಡುಗಡೆಯಾಗಲಿದ್ದು, ಚಿತ್ರದ ಯಶಸ್ಸಿಗೆ ಎಲ್ಲರ ಸಹಕಾರ ಕೋರಿದರು. ಚಿತ್ರ ಪ್ರದರ್ಶನದಿಂದ ಬರುವ ಲಾಭವನ್ನು ಶ್ರೀಮಠಕ್ಕೆ ನೀಡುವುದಾಗಿ ತಿಳಿಸಿದರು.

ಅಮೇರಿಕಾದಲ್ಲಿ ನೆಲೆಸಿರುವ ಶ್ರೀಮಠದ ಹಳೆಯ ವಿದ್ಯಾರ್ಥಿ ಶ್ರೀ ಕೆ.ಎನ್. ತಿಮ್ಮಯ್ಯನವರು ಮಾತನಾಡಿ ಪೂಜ್ಯ ಶ್ರೀಗಳು ಶ್ರೀಮಠದ ಆಡಳಿತ ಸೂತ್ರ ಹಿಡಿದಾಗ ೧೦೦ ವಿದ್ಯಾರ್ಥಿಗಳಿದ್ದು,







ಶ್ರೀ ಕೆ.ಹೆಚ್. ಶಿವರುದ್ರಯ್ಯ ಶ್ರೀ ಬಿ.ಜಿ. ಗಂಗಾಧರಯ್ಯ ಶ್ರೀ ಹೆಚ್.ಬಿ. ಗಂಗಾಧರಯ್ಯ ಶ್ರೀ ಮುದ್ದರಂಗಯ್ಯ ಶ್ರೀ ಹೆಚ್. ಗಂಗಾಧರನ್







ಈಗ ಆ ಸಂಖ್ಯೆ ೯ ಸಾವಿರ ಮುಟ್ಟಿದೆ. ಇದರ ಹಿಂದೆ ಪೂಜ್ಯ ಶ್ರೀಗಳ ಶ್ರಮ, ಸೇವೆ ಎಂತಹುದು ಎಂಬುದು ಅರ್ಥವಾಗುತ್ತದೆ. ಬಸವಣ್ಣನವರ ಕಾಯಕ, ದಾಸೋಹ ಸಿದ್ಧಾಂತವನ್ನು ಕಾರ್ಯರೂಪಕ್ಕೆ ತಂದವರು ಪೂಜ್ಯ ಶ್ರೀಗಳವರು. ದಿಕ್ಕು ದೆಸೆಯಿಲ್ಲದ ಲಕ್ಷಾಂತರ ಗ್ರಾಮೀಣ ಬಡ ವಿದ್ಯಾರ್ಥಿಗಳಿಗೆ ಆಶ್ರಯ ಕಲ್ಪಿಸಿಕೊಟ್ಟಿದ್ದಾರೆ. ಶ್ರೀಮಠದಲ್ಲಿ ಓದಿದ ವಿದ್ಯಾರ್ಥಿಗಳಿಗೆ ಶಿಕ್ಷಣದ ಜೊತೆಗೆ ಸಂಸ್ಕಾರ ದೊರೆಯುತ್ತದೆ. ಪಾಶ್ಚಿಮಾತ್ಯ ದೇಶಗಳಲ್ಲಿ ವಿದ್ಯೆಗೆ, ಆಹಾರಕ್ಕೆ ಕೊರತೆಯಿಲ್ಲ. ಆದರೆ ಅವರಿಗೆ ಸಂಸ್ಕಾರವಿಲ್ಲ. ಶ್ರೀಮಠದ ಆಶ್ರಯವಿಲ್ಲದೆ ಹೋಗಿದ್ದರೆ ದೇಶದಲ್ಲಿ 'ಆಂಟಿ ಎಲಿಮೆಂಟ್' ಆಗಿ ದೇಶಕ್ಕೆ ಒಂದು ದೊಡ್ಡ ಸಮಸ್ಯೆಯಾಗುತ್ತಿದ್ದರು ಇಂತಹ ಸಮಾಜ ಘಾತುಕ ಶಕ್ತಿಯನ್ನು ತಡೆಯುವಲ್ಲಿ ಶ್ರೀಮಠದ ಕೊಡುಗೆ ಅಪಾರವಾದುದು ಎಂದು ಹೇಳಿದರು.

ಶತಮಾನೋತ್ಸವ ಪೂರ್ವಸಿದ್ಧತೆಯನ್ನು ಕುರಿತು ಶ್ರೀಯುತರಾದ ಎಸ್. ದೇವೇಗೌಡ, ಶಿವಕುಮಾರ ಮೂರ್ತಿ ಬಿ. ಶಿವಣ್ಣ, ಗೋವಿಂದರಾಜು, ಎಸ್. ನಂಜುಂಡಪ್ಪ, ಎಸ್. ವಿಶ್ವನಾಥ, ಡಾ. ಸದಾಶಿವಯ್ಯ, ಎಸ್. ಸಿದ್ಧಗಂಗಯ್ಯ ಅವರು ತಮ್ಮ ಅಭಿಪ್ರಾಯಗಳನ್ನು ತಿಳಿಸಿದರು.

ಕಳೆದ ವಾರ್ಷಿಕ ಅಧಿವೇಶನದಿಂದ ಈವರೆಗೆ ನಿಧನರಾದ ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳವರ ಆತ್ಮಕ್ಕೆ ಪರಮಾತ್ಮನು ಚಿರಶಾಂತಿಯನ್ನು ನೀಡಲಿ ಎಂದು ಸಭೆ ಒಂದು ನಿಮಿಷ ಮೌನವನ್ನು ಆಚರಿಸುವುದರ ಮೂಲಕ ಶ್ರದ್ಧಾಂಜಲಿ ಸಲ್ಲಿಸಲಾಯಿತು. ಶ್ರದ್ಧಾಂಜಲಿಯ ಬಗ್ಗೆ ಶ್ರೀ ಕೆ.ಬಿ. ಶಿವಶಂಕರ್ ಪ್ರಾಸ್ತಾವಿಕ ನುಡಿಗಳನ್ನಾಡಿದರು.

ಇದೇ ಸಂದರ್ಭದಲ್ಲಿ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ಕಾರ್ಯದರ್ಶಿ ಶ್ರೀ ಕೆ.ಎಚ್. ಶಿವರುದ್ರಯ್ಯ ಅವರಿಗೆ ಪರಮಪೂಜ್ಯ ಶ್ರೀಗಳವರು ಶಾಲು ಹೊದಿಸಿ ಫಲತಾಂಬೂಲ ನೀಡಿ ಆಶೀರ್ವದಿಸಿದರು.

ದಿವ್ಯ ಸಾನ್ನಿಧ್ಯ ವಹಿಸಿದ್ದ ಪರಮಪೂಜ್ಯ ಶ್ರೀ ಶ್ರೀಗಳವರು ತಮ್ಮ ಆಶೀರ್ವಚನದಲ್ಲಿ "ಇಂದು ವಿಜ್ಞಾನ ಬಹಳವಾಗಿ ಬೆಳೆದಿದೆ. ಇದರಿಂದ ಪ್ರಪಂಚ ಸಂಕುಚಿತವಾಗಿದೆ. ಭರತ ಖಂಡ ಒಂದು ಜವಾಬ್ದಾರಿಯುತ ಸ್ಥಾನದಲ್ಲಿದೆ. ಭಾರತಕ್ಕೆ ಒಳ್ಳೆಯ ಹಿನ್ನಲೆಯಿದೆ. ಪರಂಪರೆಯಿದೆ. ಆದರೆ ಇಂದು ಜನ, ಹಣ, ಅಧಿಕಾರಕ್ಕಾಗಿ ಜೋತು







ಶ್ರೀ ಬಿ.ಎನ್. ಚನ್ನಪ್ಪ ಶ್ರೀ ಆರ್. ನಾರಾಯಣಸ್ವಾಮಿ ರೆಡ್ಡಿ ಶ್ರೀ ಹೆಚ್.ವಿ. ವೀರಭದ್ರಯ್ಯ ಶ್ರೀ ಕೆ.ಎನ್. ತಿಮ್ಮಯ್ಯ ಶ್ರೀ ಗೋವಿಂದಾರಾಜು

